ಸಂಜೆವಾಣಿ

ಶನಿವಾರ, 29 ಜೂನ್ 2019

# ವಿದ್ಯಾರ್ಥಿಗಳಿಗೆ ಪ್ರತಿಭಾ ಪುರಸ್ಕಾರ



ಬೆಂಗಳೂರು, ಜೂ. 29– ಶೇಷಾದ್ರಿಪುರಂ ಸಮೂಹ ಶಿಕ್ಷಣ ಸಂಸ್ಥೆ ವತಿಯಿಂದ ನಗರದ ಚೌಡಯ್ಯ ಸ್ಮಾರಕ ಸಭಾಂಗಣದಲ್ಲಿ ಆಯೋಜಿಸಿದ್ದ ಪ್ರತಿಭಾ ಪುರಸ್ಕಾರ ಸಮಾರಂಭದಲ್ಲಿ ವಿದ್ಯಾರ್ಥಿಗಳಿಗೆ ರಾಮಕೃಷ್ಣ ಸೇವಾಶ್ರಮದ ಸ್ವಾಮಿ ಜಪಾನಂದ ಅವರು 7 ಲಕ್ಷ ರೂ. ಧನ ಸಹಾಯ ನೀಡಿ ಶುಭ ಹಾರೈಸಿದರು.

ಇದೇ ಸಂಸ್ಥೆಯಲ್ಲಿ ವಿದ್ಯಾಭ್ಯಾಸ ಮಾಡಿ ರ್‍ಯಾಂಕ್ ಪಡೆದ ವಿದ್ಯಾರ್ಥಿಗಳ ಸಾಧನೆಯನ್ನು ಶ್ಲಾಘಿಸಿದ ಸ್ವಾಮೀಜಿಗಳು ಈ ಸಾಧನೆಗೆ ಪೂರಕವಾಗಿ ಶ್ರಮಿಸಿದ, ಪ್ರಸ್ತುತ ವರ್ಷ 15 ಕೋಟಿ ಹಣವನ್ನು ವಿದ್ಯಾರ್ಥಿಗಳ ಪುರಸ್ಕಾರ ನೀಡಿ ಉತ್ತೇಜಿಸುತ್ತಿರುವ ಶೇಷಾದ್ರಿಪುರಂ ವಿದ್ಯಾಸಂಸ್ಥೆಯನ್ನು ಅಭಿನಂದಿಸಿದರು ಹಾಗೂ ವಿದ್ಯಾರ್ಥಿಗಳಿಗೆ ಸಕಾರಾತ್ಮಕ ಮಾರ್ಗದರ್ಶನ ನೀಡಿದರು.

ಸಂಸ್ಥೆಯ ಗೌರವ ಪ್ರಧಾನ ಕಾರ್ಯದರ್ಶಿ ಡಾ|| ವೂಡೇ ಪಿ. ಕೃಷ್ಣರವರು ಪ್ರತಿಭಾಪುರಸ್ಕಾರ ವಿತರಣೆ ಮಾಡಿದರು. ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆಯ ಅಧ್ಯಕ್ಷರಾದ ಎನ್.ಆರ್. ಪಂಡಿತಾರಾಧ್ಯರವರು ಅಧ್ಯಕ್ಷತೆ ವಹಿಸಿದರು. ಸಮಾರಂಭದಲ್ಲಿ ಉಪಾಧ್ಯಕ್ಷರು ಟಿ.ಎಸ್. ಹೆಂಜಾರಪ್ಪ, ಗೌರವ ಸಹಾಯಕ ಕಾರ್ಯದರ್ಶಿ ಎಂ.ಎಸ್. ನಟರಾಜ್, ಧರ್ಮದರ್ಶಿಗಳು, ಬಿ.ಸಿ. ಲೋಕನಾಥ್, ಜಿ. ಪರಮಶಿವಯ್ಯ ಮತ್ತು ಮಾಜಿ ಪ್ರಾಂಶುಪಾಲರು ಎಂ.ಆರ್. ಸಂತಾನಮ್, ಪ್ರಾಂಶುಪಾಲರು ಜೆ.ಕೆ. ಮಂಜುನಾಥ್, ಉಪಪ್ರಾಂಶುಪಾಲರು ಆರ್.ವಿ. ಮಂಜುನಾಥ್ ಭಾಗವಹಿಸಿದ್ದರು.

ಸಂಯುಕ್ತ ಕರ್ನಾಟಕ ಶನಿವಾರ, 29, ಜೂನ್, 2019

# ಪ್ರತಿಭಾವಂತರಿಗೆ ಪುರಸ್ಕಾರ

ಸಂ.ಕ.ಸಮಾಚಾರ ಬೆಂಗಳೂರು

ವಿದ್ಯಾರ್ಥಿಗಳನ್ನು ಪ್ರೋತ್ಸಾಹಿಸುವ ನಿಟ್ಟಿನಲ್ಲಿ ಅವರಲ್ಲಿರುವ ಪ್ರತಿಭೆಯನ್ನು ಗುರುತಿಸಿ ಪ್ರತಿವರ್ಷ ಧನಸಹಾಯ ಮಾಡುತ್ತಿರುವುದು ಎಂದು ರಾಮಕೃಷ್ಣ ಸೇವಾಶ್ರಮದ ಜಪಾನಂದ ಸ್ವಾಮೀಜಿ ಅವರು ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆಯನ್ನು ಪ್ರಶಂಸಿಸಿದರು.

ಚೌಡಯ್ಯ ಮೆಮೋರಿಯಲ್ ಹಾಲ್‌ನಲ್ಲಿ ಆಯೋಜಿಸಿದ್ದ ಪ್ರತಿಭಾಪುರಸ್ಕಾರ ಕಾರ್ಯಕ್ರಮದಲ್ಲಿ ಮಾತನಾಡಿ ಅವರು, ಮಕ್ಕಳ ವಿದ್ಯಾಭ್ಯಾಸಕ್ಕೆ ನೆರವಾಗುವ ಮೂಲಕ ಸಂಸ್ಥೆ ಉತ್ತಮ ಕೆಲಸ ಮಾಡುತ್ತಿದೆ. ಪ್ರತಿವರ್ಷ ಸಾವಿರಾರು ಮಕ್ಕಳು ಉತ್ತಮ ಶ್ರೇಯಾಂಕಗಳಲ್ಲಿ ತೇರ್ಗಡೆ ಹೊಂದುತ್ತಿದ್ದಾರೆ. ಈ ಸಂಸ್ಥೆಯಿಂದ ಹೆಚ್ಚಿನ ಸಂಖ್ಯೆಯ ವಿದ್ಯಾರ್ಥಿಗಳಿಗೆ ಭವಿಷ್ಯ ರೂಪಿಸಿಕೊಳ್ಳುವಂತಾಗಲಿ ಎಂದು ಹರಿಸಿದರು.



ಪಿಯುಸಿಯಲ್ಲಿ ರಾಜ್ಯ ರ್‍ಯಾಂಕ್ 31 ವಿದ್ಯಾರ್ಥಿಗಳು, ಎಸ್.ಎಸ್.ಎಲ್.ಸಿ ರ್‍ಯಾಂಕ್ ಪಡೆದ ಇಬ್ಬರು ವಿದ್ಯಾರ್ಥಿಗಳ ಸಾಧನೆಯನ್ನು ಶ್ಲಾಘಿಸಿದ ಸ್ವಾಮೀಜಿಗಳು ಈ ಸಾಧನೆಗೆ ಪೂರಕವಾಗಿ ಶ್ರಮಿಸಿದ, ಪ್ರಸ್ತುತ ವರ್ಷ 2019ರಲ್ಲಿ 1.5 ಕೋಟಿ ಹಣವನ್ನು ವಿದ್ಯಾರ್ಥಿಗಳ ಪುರಸ್ಕಾರ ನೀಡಿ ಉತ್ತೇಜಿಸುತ್ತಿರುವ ಶೇಷಾದ್ರಿಪುರಂ ವಿದ್ಯಾ ಸಂಸ್ಥೆಯನ್ನು ಅಭಿನಂದಿಸಿದರು.

ಪ್ರಸಕ್ತ ಸಾಲಿನಲ್ಲಿ ಪ್ರತಿಭಾವಂತ ವಿದ್ಯಾರ್ಥಿಗಳಿಗೆ 7 ಲಕ್ಷ ಧನಸಹಾಯ ನೀಡಿ ವಿದ್ಯಾರ್ಥಿಗಳನ್ನು ಪುರಸ್ಕರಿಸಲಾಯಿತು. ಸಂಸ್ಥೆಯ ಗೌರವ ಪ್ರಧಾನ ಕಾರ್ಯದರ್ಶಿ ಡಾ.ವೂಡೇ. ಪಿ. ಕೃಷ್ಣ, ಅಧ್ಯಕ್ಷ ಎನ್.ಆರ್. ಪಂಡಿತಾರಾಧ್ಯ, ಉಪಾಧ್ಯಕ್ಷ ಟಿ.ಎಸ್. ಹೆಂಜಾರಪ್ಪ, ಗೌರವ ಸಹಾಯಕ ಕಾರ್ಯದರ್ಶಿ ಎಂ.ಎಸ್. ನಟರಾಜ್, ಧರ್ಮದರ್ಶಿ ಬಿ.ಸಿ. ಲೋಕನಾಥ್, ಎಂ.ಆರ್. ಸಂತಾನಮ್, ಪ್ರಾಂಶುಪಾಲ ಜಿ.ಕೆ. ಮಂಜುನಾಥ್, ಉಪಪ್ರಾಂಶುಪಾಲರ ಆರ್.ವಿ. ಮಂಜುನಾಥ್ ಭಾಗವಹಿಸಿದ್ದರು.

ವಿಶ್ವವಾಣಿ
ಬೆಂಗಳೂರು
vishwavani.news
27.06.2019 ಗುರುವಾರ

# ಯುವಪೀಳಿಗೆ ರಕ್ತದಾನದ ರಾಯಭಾರಿಗಳಾಗಲಿ

ವಿಶ್ವವಾಣಿ ಸುದ್ದಿಮನೆ ಬೆಂಗಳೂರು

21ನೇ ಶತಮಾನದಲ್ಲಿದ್ದರೂ ರಕ್ತವನ್ನು ಪ್ರಯೋಗಾಲಯದ ಮೂಲಕ ಪಡೆಯಲು ಆಗುತ್ತಿಲ್ಲ. ಇಂದಿಗೂ ರಕ್ತದ ಅಭಾವವನ್ನು ಎದುರಿಸುತ್ತಿದ್ದೇವೆ. ಜಗತ್ತಿನ ಯುವಪೀಳಿಗೆ ರಕ್ತದಾನದ ರಾಯಭಾರಿಗಳಾಗಬೇಕು ಎಂದು ರಾಜ್ಯ ಸ್ವಯಂ ರಕ್ತದಾನಿಗಳ ಸಂಘದ ಅಧ್ಯಕ್ಷ ಡಾ. ರಾಜು ಚಂದ್ರಶೇಖರ್ ಹೇಳಿದರು.

ರಾಷ್ಟ್ರಪಿತ ಮಹಾತ್ಮ ಗಾಂಧೀಜಿ ಅವರ 150ನೇ ಜನ್ಮವರ್ಷಾಚರಣೆ ಅಂಗವಾಗಿ ಗಾಂಧಿಭವನದಲ್ಲಿ ನಡೆದ ರಕ್ತದಾನ ಶಿಬಿರ ಹಾಗೂ ಭಿತ್ತಿಚಿತ್ರ ರಚನಾ ಸ್ಪರ್ಧೆ ಕಾರ್ಯಕ್ರಮದಲ್ಲಿ ಮಾತನಾಡಿ, ಯುವಜನತೆಯು ರಕ್ತದಾನ ಮಾಡುವ ಮಾನವೀಯ ಗುಣವನ್ನು ಬೆಳೆಸಿಕೊಳ್ಳಬೇಕು. ರಕ್ತದಾನದ ಬಗ್ಗೆ ಜನರಲ್ಲಿ ತಪ್ಪು ಕಲ್ಪನೆಗಳಿವೆ. ಕೆಲವು ಮಕ್ಕಳು ರಕ್ತದ ಬಗೆಗಿನ ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆ.

ಇದೇ ಕಾರಣದಿಂದಾಗಿ ಇಂದಿನ ದಿನಗಳಲ್ಲಿ ಅನೇಕ ಮಂದಿ ರಕ್ತದಾನಕ್ಕೆ ಹಿಂದೇಟು ಹಾಕುತ್ತಿದ್ದಾರೆ. ರಕ್ತದಾನದ ಬಗ್ಗೆ ಜನಜಾಗೃತಿ ಮೂಡಿಸುವುದು ಅವಶ್ಯವಾಗಿದೆ. ಇದನ್ನು ಎನ್‌ಎಸ್‌ಎಸ್, ರೆಡ್‌ಕ್ರಾಸ್ ಸೇವಾಘಟಕಗಳು ಮಾಡುತ್ತಿರುವುದು ಅತ್ಯಂತ ಶ್ಲಾಘನಿಯ ಎಂದರು.



ಮಹಾತ್ಮ ಗಾಂಧೀಜಿ ಅವರ 150ನೇ ಜನ್ಮವರ್ಷಾಚರಣೆ ಅಂಗವಾಗಿ ಗಾಂಧಿಭವನದಲ್ಲಿ ಹಮ್ಮಿಕೊಂಡಿದ್ದ ರಕ್ತದಾನ ಶಿಬಿರ ಹಾಗೂ ಭಿತ್ತಿಚಿತ್ರ ರಚನಾ ಸ್ಪರ್ಧೆಯ ಕಾರ್ಯಕ್ರಮವನ್ನು ರಾಜ್ಯ ಸ್ವಯಂ ರಕ್ತದಾನಿಗಳ ಸಂಘದ ಅಧ್ಯಕ್ಷ ಡಾ. ರಾಜು ಚಂದ್ರಶೇಖರ್ ಅವರು ಸಸಿಗೆ ನೀರು ಹಾಕುವ ಮೂಲಕ ಉದ್ಘಾಟಿಸಿದರು.

> ಮಾನವನ ದೇಹದ ರಕ್ತ ಒಂದು ರೀತಿಯಲ್ಲಿ ಔಷಧವಿದ್ದಂತೆ. ಒಬ್ಬ ಆರೋಗ್ಯವಂತ ಮನುಷ್ಯನ ದೇಹದ ರಕ್ತದಿಂದ ಅನೇಕ ರೋಗಗಳನ್ನು ಪರಿಹರಿಸಿಕೊಳ್ಳಬಹುದು. ದೇಶದಲ್ಲಿ ರಕ್ತದ ಅಭಾವ ನಿವಾರಣೆಯಾಗಲು ಯುವಕರು ಸ್ವ ಇಚ್ಛೆಯಿಂದ ರಕ್ತದಾನ ಮಾಡಬೇಕು.
>
> -ಡಾ. ರಾಜು ಚಂದ್ರಶೇಖರ್
> ರಾಜ್ಯ ಸ್ವಯಂ ರಕ್ತದಾನಿಗಳ ಸಂಘದ ಅಧ್ಯಕ್ಷ

ಇದೇ ಸಂದರ್ಭದಲ್ಲಿ ಅನೇಕ ವಿದ್ಯಾರ್ಥಿಗಳು ಭಾಗವಹಿಸಿ ರಕ್ತದಾನ ಮಾಡಿದರು. ರಕ್ತದಾನ ಹಾಗೂ ಭಿತ್ತಿಚಿತ್ರ ಸ್ಪರ್ಧೆಯಲ್ಲಿ ಬಹುಮಾನ ಗಳಿಸಿದ ವಿದ್ಯಾರ್ಥಿಗಳಿಗೆ ಪ್ರಶಸ್ತಿ ಪತ್ರನೀಡಲಾಯಿತು. ಗಾಂಧಿ ಸ್ಮಾರಕನಿಧಿ ಅಧ್ಯಕ್ಷ ಡಾ. ವೂಡೇ ಪಿ.ಕೃಷ್ಣ, ಡಾ. ಎಚ್.ಎಸ್.ನರೇಂದ್ರ, ಕರ್ನಾಟಕ ಚಿತ್ರಕಲಾ ಪರಿಷತ್ ಅಧ್ಯಕ್ಷ ಡಾ. ಶಂಕರ್ ಇದ್ದರು.

ಹೊಸ ದಿಗಂತ
ಗುರುವಾರ, 27 ಜೂನ್ 2019, ಬೆಂಗಳೂರು

# ರಕ್ತದಾನ ಮಾಡಿ ಹರಕೆ ತೀರಿಸಿ



**ಬೆಂಗಳೂರು:** ದೇವರಿಗೆ ಮುಡಿ ಕೊಡುವ ಬದಲು, ರಕ್ತದಾನ ಮಾಡಿ ಜೀವಗಳನ್ನು ಉಳಿಸಿ ತಮ್ಮ ಹರಕೆಗಳನ್ನು ತೀರಿಸಿಕೊಳ್ಳಿ ಎಂದು ರಾಜ್ಯ ಸ್ವಯಂ ರಕ್ತದಾನಿಗಳ ಸಂಘದ ಅಧ್ಯಕ್ಷ ಡಾ.ರಾಜು ಚಂದ್ರಶೇಖರ್ ತಿಳಿಸಿದರು.

ರೆಡ್ ಕ್ರಾಸ್, ಎನ್‌ಎಸ್‌ಎಸ್ ಹಾಗೂ ಚಿತ್ರಕಲಾ ಪರಿಷತ್ ಸಹಯೋಗದಲ್ಲಿ ಕರ್ನಾಟಕ ಗಾಂಧಿ ಭವನ ಹಮ್ಮಿಕೊಂಡಿದ್ದ ಬಾ ಬಾಪು-150ನೇ ಜನ್ಮ ವರ್ಷಾಚರಣೆಯಲ್ಲಿ ಮಾತನಾಡಿದ ಅವರು, ದೇಶದಲ್ಲಿರೋ ದೊಡ್ಡ ದೊಡ್ಡ ದೇವಸ್ಥಾನಗಳು ರಕ್ತ ನಿಧಿಗಳನ್ನು ತೆರೆದು ಜೀವರಕ್ಷಣೆಗೆ ಮುಂದಾಗಬೇಕು. ರಕ್ತದಾನ ಮೂಲಕ ಶಾಂತಿ ಸೌಹಾರ್ದತೆ ಕಾಪಾಡುವ ಕಾರ್ಯಕ್ರಮ ಹಮ್ಮಿಕೊಂಡ ಮೊದಲ ಗಾಂಧಿ ಭವನ ಇದಾಗಿದೆ ಎಂದು ಶ್ಲಾಘಿಸಿದರು. ರಕ್ತದಾನದ ಕುರಿತಾಗಿ ಜನರಲ್ಲಿ ಅನೇಕ ತಪ್ಪು ಕಲ್ಪನೆಗಳಿವೆ. ಅದನ್ನ ಹೋಗಲಾಡಿಸಿ ಯುವಜನತೆ ರಕ್ತಯದಾನಕ್ಕೆ ಮುಂದಾಗಬೇಕು. ದಾನ ಎಂಬ ಪದಕ್ಕೆ ನಿಜವಾದ ಅರ್ಥ ಕಲ್ಪಿಸಿಕೊಟ್ಟವರು ಮಹಾತ್ಮಾ ಗಾಂಧಿ ಜಿ. ರಕ್ತದಾನದ ಮೂಲಕ ಅವರಿಗೆ ನಿಜವಾದ ಗೌರವ ಸಲ್ಲಿಸಲಾಗಿದೆ ಎಂದು ಎನ್‌ಎಸ್‌ಎಸ್ ರಾಜ್ಯ ಸಂಪರ್ಕಾಧಿಕಾರಿ ಡಾ.ಗಣನಾಥ ಶೆಟ್ಟಿ ಎಕ್ಕಾರು ತಿಳಿಸಿದರು.

100 ಕ್ಕೂ ಹೆಚ್ಚು ವಿದ್ಯಾರ್ಥಿಗಳು ರಕ್ತದಾನ ಮಾಡಿದರು. ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ಡಾ.ವೂಡೇ ಪಿ.ಕೃಷ್ಣ, ಕಾರ್ಯದರ್ಶಿ ಇಂದಿರಾ ಕೃಷ್ಣಪ್ಪ, ಖ್ಯಾತ ವೈದ್ಯ ಡಾ.ಎಚ್.ಎನ್.ನರೇಂದ್ರ ಹಾಗೂ ಇನ್ನಿತರ ಗಣ್ಯರು ಉಪಸ್ಥಿತರಿದ್ದರು.

ಈ ಸಂಜೆ

Wed. 26 June 2019

# ಯುವ ಪೀಳಿಗೆ ರಕ್ತದಾನ ಮಾಡುವ

# ಗುಣ ರೂಢಿಸಿಕೊಳ್ಳಲು ಕರೆ



ಬೆಂಗಳೂರು, ಜೂ.26-21ನೇ ಶತಮಾನದಲ್ಲಿ ಎಲ್ಲವೂ ನಮ್ಮ ಅಂಗೈಯಲ್ಲೇ ದೊರೆಯುತ್ತಿದ್ದು ಆದರೆ ರಕ್ತವನ್ನು ಪ್ರಯೋಗಾಲಯಗಳಲ್ಲಿ ಪಡೆಯಲು ಸಾಧ್ಯವಿಲ್ಲ. ಹಾಗಾಗಿ ಯುವಪೀಳಿಗೆ ರಕ್ತದಾನ ಮಾಡುವ ಮಾನವೀಯತೆ ಗುಣವನ್ನು ರೂಢಿಸಿಕೊಳ್ಳಬೇಕು ಎಂದು ಡಾ.ರಾಮು ಚಂದ್ರಶೇಖರ್ ಹೇಳಿದರು.

ರಾಷ್ಟ್ರಪಿತ ಮಹಾತ್ಮ ಗಾಂಧೀಜಿ ಅವರ 150ನೇ ಜನ್ಮ ದಿನಾಚರಣೆ ಅಂಗವಾಗಿ ಗಾಂಧಿಭವನದಲ್ಲಿ ನಡೆದ ರಕ್ತದಾನ ಶಿಬಿರ ಹಾಗೂ ಚಿತ್ರಕಲಾ ರಚನಾ ಸ್ಪರ್ಧೆ ಕಾರ್ಯಕ್ರಮಕ್ಕೆ ಚಾಲನೆ ನೀಡಿ ಮಾತನಾಡಿದ ಅವರು, ಇಂದು ನಮಗೆ ಮಾರುಕಟ್ಟೆಯಲ್ಲಿ ಎಲ್ಲ ರೀತಿಯ ಪದಾರ್ಥಗಳು ಸಿಗುತ್ತವೆ ಆದರೆ ಜೀವ ಉಳಿಸುವ ರಕ್ತ ಮಾತ್ರ ದೊರೆಯುತ್ತಿಲ್ಲ. ಯುವಪೀಳಿಗೆಯಲ್ಲಿ ರಕ್ತದಾನದ ಬಗ್ಗೆ ತಪ್ಪು ಕಲ್ಪನೆಗಳಿವೆ ಇದರಿಂದ ಕೆಲವೊಮ್ಮೆ ರಕ್ತದ ಸಮಸ್ಯೆಯನ್ನು ಎದುರಿಸುತ್ತಿದ್ದೇವೆ ಎಂದು ಹೇಳಿದರು.

ಇದುವರೆಗೂ ಕ್ರೋಢೀಕರಿಸುವ ರಕ್ತದಲ್ಲಿ ಶೇ.80ರಷ್ಟು ರಕ್ತ ಯುವಜನರಿಂದ ಸಂಗ್ರಹವಾಗಿದ್ದು 2017-18 ಸಾಲಿನಲ್ಲಿ ಒಂದು ಕೋಟಿಗೂ ಅಧಿಕ ರಕ್ತ ಯೂನಿಟ್‌ಗಳು ಸಂಗ್ರಹವಾಗಿದೆ ಎಂದು ತಿಳಿಸಿದರು.

ದೇಶದಲ್ಲಿ ರಕ್ತದಾನದ ಬಗ್ಗೆ ಜಾಗೃತಿ ಮೂಡಿಸುವ ಅವಶ್ಯಕತೆಯಿದೆ. ಈ ಕೆಲಸವನ್ನು ಕೆಲವು ಎನ್‌ಎಸ್‌ಎಸ್ ಸೇವಾ ಘಟಕಗಳು ಜನರಲ್ಲಿ ಅರಿವು ಮೂಡಿಸುವ ಕೆಲಸ ಮಾಡುತ್ತಿವೆ. ಗಾಂಧೀಜಿ ಜನ್ಮದಿನಾಚರಣೆ ಅಂಗವಾಗಿ ಈ ಕಾರ್ಯಕ್ರಮ ಮಾಡುತ್ತಿರುವುದು ಅರ್ಥಪೂರ್ಣವಾಗಿದೆ. ಇದರಿಂದ ಗಾಂಧೀಜಿಯವರಿಗೆ ನಿಜವಾದ ಗೌರವ ಸಿಕ್ಕಿದೆ ಎಂದು ಅಭಿನಂದಿಸಿದರು.

ಭಾರತೀಯ ರೆಡ್‌ಕ್ರಾಸ್ ಸಂಸ್ಥೆ ಜೊತೆ ರಕ್ತದಾನ ಶಿಬಿರಗಳಲ್ಲಿ ಎಲ್ಲಾ ಕಾಲೇಜುಗಳು ಭಾಗವಹಿಸುವಂತೆ ಕಾಲೇಜುಗಳಿಗೆ ಪತ್ರ ಬರೆಯುವ ಚಿಂತನೆ ಹೊಂದಿದ್ದೇವೆ ಎಂದು ತಿಳಿಸಿದರು.

ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ಡಾ.ವೂಡೇ ಪಿ.ಕೃಷ್ಣ, ಡಾ.ಎಚ್.ಎಸ್.ನರೇಂದ್ರ, ಕರ್ನಾಟಕ ಚಿತ್ರಕಲಾ ಪರಿಷತ್ ಅಧ್ಯಕ್ಷ ಡಾ.ಬಿ.ಎಲ್.ಶಂಕರ್ ಉಪಸ್ಥಿತರಿದ್ದರು.

ಸಂಜೆವಾಣಿ

ಬುಧವಾರ, 26 ಜೂನ್ 2019



ಕರ್ನಾಟಕ ಗಾಂಧಿ ಸ್ಮಾರಕ ನಿಧಿ ವತಿಯಿಂದ ಗಾಂಧಿ ಭವನದಲ್ಲಿಂದು ನಡೆದ ರಕ್ತದಾನ ಶಿಬಿರ ಹಾಗೂ ಭಿತ್ತಿಪತ್ರ ರಚನಾ ಸ್ಪರ್ಧೆಯನ್ನು ಅಧ್ಯಕ್ಷ ಡಾ ವೂಡೇ ಪಿ.ಕೃಷ್ಣ ಉದ್ಘಾಟಿಸಿದರು. ರಾಜ್ಯ ಸ್ವಯಂ ರಕ್ತದಾನಿಗಳ ಒಕ್ಕೂಟದ ಅಧ್ಯಕ್ಷ ಡಾ. ರಾಜುಚಂದ್ರ ಶೇಖರ್, ಡಾ. ಎಸ್.ಎಸ್.ನರೇಂದ್ರ ಮತ್ತಿತರರು ಭಾಗವಹಿಸಿದ್ದರು.

ಉದಯವಾಣಿ ಭಾನುವಾರ, ಜೂನ್ 16, 2019

# ಸ್ವಾಭಿಮಾನ ಹೆಚ್ಚಿಸಿಕೊಳ್ಳಲು ಪುಸ್ತಕಗಳನ್ನು ಓದಿ

## ಆದಿಚುಂಚನಗಿರಿ ಮಠದ ಪೀಠಾಧ್ಯಕ್ಷ ನಿರ್ಮಲಾನಂದನಾಥ ಸ್ವಾಮೀಜಿ ಸಲಹೆ



ವಿಜಯನಗರದ ಆದಿಚುಂಚನಗಿರಿ ಸಮುದಾಯ ಭವನದಲ್ಲಿ ನಡೆದ ಕಾರ್ಯಕ್ರಮದಲ್ಲಿ ಲೇಖಕ ಎಚ್.ಹನುಮಂತ ರಾಯಪ್ಪ ಅವರ 'ನನ್ನ ಕನಸಿನ ಪ್ರಬುದ್ಧ ಭಾರತ' ಪುಸ್ತಕವನ್ನು ಆದಿಚುಂಚನ ಗಿರಿ ಪೀಠಾಧ್ಯಕ್ಷ ನಿರ್ಮಲಾನಂದನಾಥ ಸ್ವಾಮೀಜಿ ಬಿಡುಗಡೆ ಮಾಡಿದರು.

ಬೆಂಗಳೂರು: ದೇಶದ ಚರಿತ್ರೆ ಬಗ್ಗೆ ನಿಖರವಾಗಿ ತಿಳಿದುಕೊಂಡು ಸ್ವಾಭಿಮಾನ ಹೆಚ್ಚಿಸಿಕೊಳ್ಳಲು ಪುಸ್ತಕಗಳನ್ನು ಓದಬೇಕು ಎಂದು ಆದಿಚುಂಚನಗಿರಿ ಮಠದ ಪೀಠಾಧ್ಯಕ್ಷ ನಿರ್ಮಲಾನಂದನಾಥ ಸ್ವಾಮೀಜಿ ತಿಳಿಸಿದ್ದಾರೆ.

ವಿಜಯನಗರದ ಆದಿಚುಂಚನಗಿರಿ ಸಮುದಾಯ ಭವನದಲ್ಲಿ ಶನಿವಾರ ನಡೆದ ಕಾರ್ಯಕ್ರಮದಲ್ಲಿ ಲೇಖಕ ಎಚ್. ಹನುಮಂತರಾಯಪ್ಪ ಅವರ 'ನನ್ನ ಕನಸಿನ ಪ್ರಬುದ್ಧ ಭಾರತ' ಪುಸ್ತಕವನ್ನು ಬಿಡಗಡೆ ಮಾಡಿ ಮಾತನಾಡಿದ ಅವರು, ಹೆಸರಾಂತ ಇತಿಹಾಸಕಾರರು ನಮ್ಮ ದೇಶದ ಚರಿತ್ರೆ ಬಗ್ಗೆ ಆನೇಕ ಪುಸ್ತಕಗಳನ್ನು ಬರೆದಿದ್ದಾರೆ. ಹಿಂದಿನ ಕಾಲದಲ್ಲಿ ದೇಶದ ಬಗ್ಗೆ ಅಜ್ಜಿಯಂದಿರು ಮಕ್ಕಳಿಗೆ ಹೇಳುತ್ತಿದ್ದರು. ಈಗ ಕಾಲ ಬದಲಾಗಿದ್ದು ಪುಸ್ತಕಗಳನ್ನು ಓದಿದರೆ ಮಾತ್ರ ವಿಷಯಗಳು ತಿಳಿಯಲಿವೆ. ಅವುಗಳನ್ನು ಓದುವ ಹವ್ಯಾಸ ಬೆಳೆಸಿಕೊಂಡು ನಮ್ಮ ದೇಶದ ಚರಿತ್ರೆ ಬಗ್ಗೆ ತಿಳಿದುಕೊಳ್ಳಬೇಕು. ಪುಸ್ತಕ ಓದುವುದರಿಂದ ನಮ್ಮ ಹಾಗೂ ಸಮಾಜದಲ್ಲಿರುವ ನ್ಯೂನತೆಗಳನ್ನು ಸರಿಪಡಿಸಿಕೊಂಡು ಅಭಿವೃದ್ಧಿಯ ಪಥದತ್ತ ಕೊಂಡೊಯ್ಯಲು ಸಹಾಯಕವಾಗುತ್ತದೆ. ಇನ್ನು ಸಾಹಿತಿಗಳು ತಮ್ಮ ಬರಹ ಮುಖೇನ ಸಮಾಜದ ಓರೆಕೋರೆಗಳನ್ನು ತಿದ್ದುವ ಕೆಲಸ ಮಾಡುತ್ತಿದ್ದಾರೆ ಎಂದರು.

ಸಾಹಿತಿ ಜಾಣಗೆರೆ ವೆಂಕಟರಾಮಯ್ಯ ಮಾತನಾಡಿ, ಆರೋಗ್ಯ ಪೂರ್ಣ ಸಮಾಜ ನಿರ್ಮಾಣಕ್ಕೆ ಜಾತಿಯ ಬೇರನ್ನು ಬುಡ ಸಮೇತ ಕಿತ್ತು ಹಾಕಬೇಕು. 'ನನ್ನ ಕನಸಿನ ಪ್ರಬುದ್ಧ ಭಾರತ' ಪುಸ್ತಕದಲ್ಲಿ ದೇಶದ ಅಭಿವೃದ್ಧಿಗಾಗಿ ತುರ್ತಾಗಿ ಕೈಗೊಳ್ಳಬೇಕಾದ ಕ್ರಮಗಳ ಬಗ್ಗೆ ಹನಮಂತರಾಯಪ್ಪ ಸಾಕಷ್ಟು ಸಲಹೆಗಳನ್ನು ನೀಡಿದ್ದಾರೆ ಎಂದು ತಿಳಿಸಿದರು. ವಿಜಯನಗದ ಆದಿಚುಂಚನಗಿರಿ ಶಾಖಾ ಮಠದ ಶ್ರೀ ಸೌಮ್ಯನಾಥ ಸ್ವಾಮೀಜಿ, ಶಿಕ್ಷಣ ತಜ್ಞ ಡಾ.ವೂಡೆ ಪಿ.ಕೃಷ್ಣ ಇತರರಿದ್ದರು.

ಉದಯವಾಣಿ | ಭಾನುವಾರ, ಜೂನ್ 16, 2019

# ಪ್ರತಿಭಾವಂತರಿಗೆ ಪ್ರೋತ್ಸಾಹ ನೀಡಿ



ಕೆಂಗೇರಿ ಉಪನಗರದ ಶೇಷಾದ್ರಿಪುರಂ ಸ್ವತಂತ್ರ ಪದವಿ ಪೂರ್ವ ಕಾಲೇಜಿನಲ್ಲಿ ಹಮ್ಮಿಕೊಳ್ಳಲಾಗಿದ್ದ ಪ್ರತಿಭಾ ಪುರಸ್ಕಾರ' ಕಾರ್ಯಕ್ರಮವನ್ನು ಹಿರಿಯ ಸಾಹಿತಿ ಡಾ,ದೊಡ್ಡರಂಗೇಗೌಡ ಉದ್ಘಾಟಿಸಿದರು.

ಕೆಂಗೇರಿ: ಪ್ರತಿಭಾವಂತ ವಿದ್ಯಾರ್ಥಿಗಳಿಗೆ ಪ್ರೋತ್ಸಾಹ ನೀಡಿ ಶಕ್ತಿ ತುಂಬುವ ಕೆಲಸ ಮಾಡಬೇಕು ಆಗ ಅದು ಅವರಲ್ಲಿ ಹುಮ್ಮಸ್ಸು ಮೂಡಿ ಉತ್ತಮ ಸಾಧನೆ ಮಾಡಲು ಸಾಧ್ಯ ಎಂದು ಹಿರಿಯ ಸಾಹಿತಿ ಡಾ.ದೊಡ್ಡರಂಗೇಗೌಡ ಹೇಳಿದರು.

ಅವರು ಕೆಂಗೇರಿ ಉಪನಗರದ ಶೇಷಾದ್ರಿಪುರಂ ಸ್ವತಂತ್ರ ಪಿಯು ಕಾಲೇಜಿನಲ್ಲಿ ಹಮ್ಮಿಕೊಳ್ಳಲಾಗಿದ್ದ ಪ್ರಥಮ ಪಿಯುಸಿ ಪುನಶ್ಚೇತನ ಮತ್ತು ಶಿಕ್ಷಣ. ದತ್ತಿ ಪ್ರತಿಭಾ ಪುರಸ್ಕಾರ ಕಾರ್ಯಕ್ರಮದ ಮುಖ್ಯ ಅತಿಥಿಗಳಾಗಿ ಪಾಲ್ಗೊಂಡು ಮಾತನಾಡಿ ವಿದ್ಯಾರ್ಥಿಗಳು ಯಾವುದೇ ಸಾಧನೆ ಮಾಡಬೇಕಾದರೆ ಅದಕ್ಕೆ ಕಠಿಣ ಪರಿಶ್ರಮ,ಶ್ರದ್ಧೆ ಹಾಗೂ ಸಮಯಕ್ಕೆ ಒತ್ತನ್ನು ನೀಡಬೇಕು, ಸಾಧಕರನ್ನು ಗುರಿಯಾಗಿಟ್ಟು ಕೊಂಡು ಅವರನ್ನು ರೋಲ್ ಮಾಡೆಲ್ ಮಾಡಿಕೊಂಡು ಮುಂದೆ ಬನ್ನಿ ಎಂದ ಅವರು ಗುರು ಹಿರಿಯರಿಗೆ ಗೌರವವನ್ನು ನೀಡಬೇಕು ಎಂದರು.

ಶೇಷಾದ್ರಿಪುರಂ ಶಿಕ್ಷಣ ದತ್ತಿಯ ಗೌರವ ಪ್ರಧಾನ ಕಾರ್ಯದರ್ಶಿಗಳಾದ ಡಾ. ವೂಡೇ ಪಿ. ಕೃಷ್ಣ ಅಧ್ಯಕ್ಷರಾದ ಎನ್. ಆರ್. ಪಂಡಿತಾರಾಧ್ಯ ಕಾರ್ಯಕ್ರಮದ ಅಧ್ಯಕ್ಷತೆಯನ್ನು ವಹಿಸಿ ಮಾತನಾಡಿದರು.

ಶಿಕ್ಷಣ ದತ್ತಿಯ ಗೌರವ ಸಹಾಯಕ ಕಾರ್ಯದರ್ಶಿಗಳಾದ ಎಂ. ಎಸ್. ನಟರಾಜ್, ಗೌರವ ಧರ್ಮದರ್ಶಿಗಳಾದ ಡಬ್ಲ್ಯೂ. ಡಿ. ಅಶೋಕ್, ನಿವೃತ್ತ ಪ್ರಾಂಶುಪಾಲರಾದ ಪ್ರೊ. ಜಿ. ರಾಧಾಕೃಷ್ಣ ಪದವಿ ಕಾಲೇಜಿನ ಪ್ರಾಂಶುಪಾಲ ಪ್ರೊ. ಜಯರಾಮ್,ಪಿಯು ಕಾಲೇಜಿನ ಪ್ರಾಂಶುಪಾಲ ಡಾ. ಆರ್. ಮಂಜುನಾಥ್ ಸೇರಿದಂತೆ ಉಪನ್ಯಾಸಕರು,ವಿದ್ಯಾರ್ಥಿಗಳಿದ್ದರು.

ವಿಶ್ವವಾಣಿ

ಬೆಂಗಳೂರು
vishwavani.news
16.06.2019 ಭಾನುವಾರ

# ಪ್ರತಿಭಾವಂತ ವಿದ್ಯಾರ್ಥಿಗಳಿಗೆ ಪ್ರೋತ್ಸಾಹ ನೀಡಿ



ಕೆಂಗೇರಿ ಉಪನಗರದ ಶೇಷಾದ್ರಿಪುರ ಸ್ವತಂತ್ರ ಪದವಿ ಪೂರ್ವ ಕಾಲೇಜಿನಲ್ಲಿ ಹಮ್ಮಿಕೊಳ್ಳಲಾಗಿದ್ದ ಕಾರ್ಯಕ್ರಮವನ್ನು ಸಾಹಿತಿ ಡಾ. ದೊಡ್ಡ ರಂಗೇಗೌಡ ಉದ್ಘಾಟಿಸಿದರು. ಎನ್.ಆರ್. ಪಂಡಿತಾರಾಧ್ಯ, ಗೌರವ ಪ್ರಧಾನ ಕಾರ್ಯದರ್ಶಿ ಡಾ. ವೂಡೇ ಪಿ.ಕೃಷ್ಣ ಇದ್ದರು.

**ವಿಶ್ವವಾಣಿ ಸುದ್ದಿಮನೆ** ಬೆಂಗಳೂರು

ಪ್ರತಿಭಾವಂತ ವಿದ್ಯಾರ್ಥಿಗಳಿಗೆ ಪ್ರೋತ್ಸಾಹ ನೀಡಿ ಶಕ್ತಿ ತುಂಬುವ ಕೆಲಸ ಮಾಡಬೇಕು. ಆಗ ಅವರಲ್ಲಿ ಹುಮ್ಮಸ್ಸು ಮೂಡಿ ಉತ್ತಮ ಸಾಧನೆ ಮಾಡಲು ಸಹಕಾರಿಯಾಗುತ್ತದೆ ಎಂದು ಸಾಹಿತಿ ಡಾ. ದೊಡ್ಡರಂಗೇಗೌಡ ಹೇಳಿದರು.

ಶೇಷಾದ್ರಿಪುರ ಸ್ವತಂತ್ರ ಪದವಿ ಪೂರ್ವ ಕಾಲೇಜಿನಲ್ಲಿ ಹಮ್ಮಿಕೊಳ್ಳಲಾಗಿದ್ದ ಪ್ರಥಮ ಪಿಯುಸಿ ಮನಃಶ್ಚೇತನ ಹಾಗೂ ಶಿಕ್ಷಣ ದತ್ತಿ ಪ್ರತಿಭಾ ಪುರಸ್ಕಾರ ಕಾರ್ಯಕ್ರಮದಲ್ಲಿ ಮಾತನಾಡಿದ ಅವರು, ವಿದ್ಯಾರ್ಥಿಗಳು ಯಾವುದೇ ಸಾಧನೆ ಮಾಡಬೇಕಾದರೆ ಅದಕ್ಕೆ ಕಠಿಣ ಪರಿಶ್ರಮ, ಶ್ರದ್ಧೆ ಹಾಗು ಸಮಯಕ್ಕೆ ಒತ್ತನ್ನು ನೀಡಬೇಕು. ಸಾಧಕರನ್ನು ಗುರಿಯಾಗಿಟ್ಟುಕೊಂಡು ಅವರನ್ನು ಮಾದರಿ ಮಾಡಿಕೊಂಡು ಮುಂದೆ ಬನ್ನಿ ಎಂದ ಅವರು ಗುರು ಹಿರಿಯರಿಗೆ ಗೌರವ ನೀಡಬೇಕು ಎಂದರು. ಶೇಷಾದ್ರಿಪುರ ಶಿಕ್ಷಣ ದತ್ತಿಯ ಗೌರವ ಪ್ರಧಾನ ಕಾರ್ಯದರ್ಶಿ ಡಾ. ವೂಡೇ ಪಿ.ಕೃಷ್ಣ ಮಾತನಾಡಿ, ನಮ್ಮ ಶಿಕ್ಷಣ ದತ್ತಿಯ ಎಲ್ಲಾ ಕಾಲೇಜುಗಳಲ್ಲಿ ವಿದ್ಯಾರ್ಥಿಗಳು ಉತ್ತಮ ಸಾಧನೆ ಮಾಡಿದ್ದು, ಇಂದು ಇಪ್ಪತ್ತೈದು ಸಾವಿರಕ್ಕೂ ಹೆಚ್ಚು ವಿದ್ಯಾರ್ಥಿಗಳು ಕಲಿಯುತ್ತಿರುವುದು ಹೆಮ್ಮೆಯ ವಿಷಯ. ನಾವು ಸಂಸ್ಥೆಯ ವತಿಯಿಂದ ಪ್ರತಿಭಾವಂತ ವಿದ್ಯಾರ್ಥಿಗಳನ್ನು ಗುರುತಿಸಿ ಪ್ರತಿಭಾ ಪುರಸ್ಕಾರವನ್ನೂ ಮಾಡುತ್ತಿದ್ದೇವೆ. ಎಸ್‌ಎಸ್‌ಎಲ್‌ಸಿಯಲ್ಲಿ ಶೇ. 85ಕ್ಕೂ ಹೆಚ್ಚು ಅಂಕ ಪಡೆದವರಿಗೆ ಹತ್ತು ಸಾವಿರ ಸ್ಕಾಲರ್‌ಶಿಪ್ ಮತ್ತು ಶೇ.95ಕ್ಕೂ ಹೆಚ್ಚು ಅಂಕಗಳಿಸಿದವರಿಗೆ ಉಚಿತ ಪ್ರವೇಶ ನೀಡುತ್ತಿದ್ದೇವೆ ಎಂದು ಅವರು ಹೇಳಿದರು.

ಹೊಸ ದಿಗಂತ

ಮಂಗಳವಾರ
28 ಮೇ 2019

## ಅತಿಯಾದ ಯಂತ್ರ ನಾಗರೀಕತೆ: ಪ್ರೊ.ಮಲ್ಲೇಪುರಂ ಜಿ.ವೆಂಕಟೇಶ್ ಬೇಸರ

# ಕೈಗಾರಿಕೆ ಸಮೃದ್ಧಿಯಿಂದ ದೇಶ ಬಲಿಷ್ಠ

**ದಿಗಂತ ವರದಿ, ಬೆಂಗಳೂರು**

ಭಾರತ ಸಮೃದ್ಧವಾಗಲು ಕೈಗಾರಿಕೆಗಳು ಬಲಿಷ್ಠವಾಗಬೇಕಿದ್ದು,ಗುಡಿ ಕೈಗಾರಿಕೆಗಳನ್ನು ಹೆಚ್ಚು ಪ್ರೋತ್ಸಾಹಿಸಬೇಕಿದೆ. ಆದರೆ, ಇಂದು ದೇಶದಲ್ಲಿ ಯಂತ್ರ ನಾಗರೀಕತೆ ಅತಿಯಾಗಿದೆ ಎಂದು ಕರ್ನಾಟಕ ಸಂಸ್ಕೃತ ವಿಶ್ವವಿದ್ಯಾಲಯ ವಿಶ್ರಾಂತ ಕುಲಪತಿ ಪ್ರೊ.ಮಲ್ಲೇಪುರಂ ಜಿ.ವೆಂಕಟೇಶ್ ಬೇಸರ ವ್ಯಕ್ತಪಡಿಸಿದರು.

ನಗರದ ಶೇಷಾದ್ರಿಪುರ ಕಾಲೇಜಿನ ಗಾಂಧಿ ಅಧ್ಯಯನ ಕೇಂದ್ರದಲ್ಲಿ ಸೋಮವಾರ ಗಾಂಧಿ ಶಾಂತಿ ಪ್ರತಿಷ್ಠಾನ ಬೆಂಗಳೂರು, ಗಾಂಧಿ ಅಧ್ಯಯನ ಕೇಂದ್ರ ವತಿಯಿಂದ ಆಯೋಜಿಸಿದ್ದ ಭವಿಷ್ಯದ ಭಾರತಕ್ಕೆ ಗಾಂಧಿ ವಿಷಯದ ಕುರಿತ ಉಪನ್ಯಾಸದಲ್ಲಿ ಅವರು ಮಾತನಾಡಿದರು.

ದೇಶದಲ್ಲಿ ಪಂಚವಾರ್ಷಿಕ ಯೋಜನೆ ಜಾರಿಯಾದ ಬಳಿಕ ಎಲ್ಲೆಡೆ ಬೃಹತ್ ಕೈಗಾರಿಕೆಗಳು ಆರಂಭವಾದವು. ಇದೇ ಸಂದರ್ಭದಲ್ಲಿ ಗುಡಿ ಕೈಗಾರಿಕೆಗಳಿಗೆ ನೀಡಬೇಕಾದ ಪ್ರೋತ್ಸಾಹ, ಉತ್ತೇಜನ ಕಡಿಮೆಯಾಯಿತು. ಇದರಿಂದ ದೇಶದಾದ್ಯಂತ ಕಾರ್ಖಾನೆಗಳಲ್ಲಿ ಯಾಂತ್ರೀಕರಣ ವೃದ್ಧಿಗೊಂಡಿದೆ. ಇದರಿಂದ ದುಡಿಯುವ ಕೈಗಳಿಗೆ ಕೆಲಸವಿಲ್ಲದಂತಾಯಿತು ಎಂದು ತಿಳಿಸಿದರು.



ನೂರಾರು ಮಾಡುತ್ತಿದ್ದಂತಹ ಕೆಲಸ ಇಂದು ಒಂದೆರಡು ಯಂತ್ರಗಳು ನಿರ್ವಹಿಸುತ್ತಿವೆ. ಮನುಷ್ಯರು ಯಂತ್ರಗಳಿಗೆ ದಾಸರಾಗಿದ್ದು, ಈಗ ಎಲ್ಲವೂ ಯಂತ್ರ ನಿರ್ಮಿತವಾಗುತ್ತಿವೆ. ಹೀಗಾಗಿ, ನಾವು ಯಂತ್ರ ಮಾನವರಾಗಿದ್ದೇವೆ ಎಂದರು.

ಸ್ವಚ್ಛ ಭಾರತ್ ಮಿಷನ್ ರೀತಿಯಲ್ಲಿ ಭವಿಷ್ಯ ಭಾರತದಲ್ಲಿ ವಿದ್ಯಾರ್ಥಿಗಳ ಆಂತರಿಕ ಹಾಗೂ ಬಾಹ್ಯ ಸ್ವಚ್ಛತೆ ಅತ್ಯಂತ ಅವಶ್ಯವಾಗಿದೆ. ಅಂದಾಗ ಮಾತ್ರ ಗಾಂಧಿ ಕನಸು ನನಸಾಗಲು ಸಾಧ್ಯ.ಮುಂದಿನ ಭವಿಷ್ಯದಲ್ಲಿ ಗಾಂಧಿಯನ್ನು ಅನುಸರಿಸದಿದ್ದಲ್ಲಿ ಮನುಷ್ಯ ಬದುಕುವುದು ಕಷ್ಟವಾಗಬಹುದು. ಪ್ರತಿಯೊಬ್ಬರಿಗೂ ಸಾಧನೆ ಮಾಡಲು ಸಾಧ್ಯವಿದೆ. ಆದರೆ, ನಮ್ಮಲ್ಲಿರುವ ದುರಾಸೆಗಳು ಬಿಡಬೇಕು. ಗಾಂಧಿಯವರ ತತ್ವಾದರ್ಶಗಳನ್ನು ರೂಢಿಸಿಕೊಳ್ಳಬೇಕು. ಅವರ ಜೀವನವನ್ನು ಓದಿಕೊಂಡು, ಅರ್ಥ ಮಾಡಿಕೊಳ್ಳಬೇಕು ಎಂದು ಹೇಳಿದರು.

ನಾವೆಲ್ಲ ವರ್ತಮಾನದಲ್ಲಿದ್ದೇವೆ. ಜಗತ್ತಿಗೆ ಎಲ್ಲರ ಕೊಡುಗೆ ಹಾಗೂ ಪ್ರಬುದ್ಧವಾದ ಜವಾಬ್ದಾರಿ ಇವೆ. ದೇಶದ ಕೆಲವು ಜವಾಬ್ದಾರಿಗಳನ್ನು ಹೊತ್ತುಕೊಳ್ಳುವ ಹಂತಕ್ಕೂ ತಲುಪಿದ್ದೇವೆ. ಹೀಗಾಗಿ, ಗಾಂಧೀಜಿಯ ಮಾರ್ಗದರ್ಶನದಲ್ಲಿ, ಅವರ ಆಶಯ, ತತ್ವಗಳನ್ನು ಆದರ್ಶವಾಗಿಸಿಕೊಂಡು ಜೀವನ ನಡೆಸಬೇಕು ಎಂದು ಸಲಹೆ ನೀಡಿದರು.

**ಉಪನ್ಯಾಸದಿಂದ ಜ್ಞಾನ ಹೆಚ್ಚಳ:** ಕರ್ನಾಟಕ ಗಾಂಧೀ ಸ್ಮಾರಕ ನಿಧಿಯ ಅಧ್ಯಕ್ಷ ಡಾ.ವೂಡೇ ಪಿ.ಕೃಷ್ಣ ಮಾತನಾಡಿ, ಹತ್ತಾರು ಪುಸ್ತಕಗಳನ್ನು ಓದಿದಷ್ಟು ಜ್ಞಾನ ಉಪನ್ಯಾಸದಿಂದ ಸಿಗುತ್ತದೆ. ಒಳ್ಳೆಯ ಚಿಂತನೆಗಳು ನಮ್ಮಲ್ಲಿ ರೂಡಿಸಿಕೊಳ್ಳಬೇಕು. ಅದಕ್ಕಾಗಿ ಗಾಂಧಿ, ಅಂಬೇಡ್ಕರ್, ವಿವೇಕಾನಂದರಂತ ಆದರ್ಶಗಳು ಮುಖ್ಯವಾಗಿದೆ ಎಂದು ಹೇಳಿದರು.

ದೇಶದಲ್ಲಿ ಅಹಿಂಸಾತ್ಮಕ ಸಮಾಜ ನಿರ್ಮಾಣ ಮಾಡುವ ಕನಸು ಕಂಡವರು ಮಹಾತ್ಮಾ ಗಾಂಧೀಜಿ. ಅಲ್ಲದೆ, ಭಾರತವನ್ನು ಬಹುತ್ವದ ದೇಶವನ್ನಾಗಿಸಬೇಕು, ಅದನ್ನು ಕಾಪಾಡಿಕೊಳ್ಳಬೇಕು ಎಂದು ಶ್ರಮಿಸಿದ್ದರು. ರಾಜಕೀಯದಲ್ಲಿ ಅವರ ವಿಚಾರಗಳು, ಅವರ ಸಹಭಾಗಿತ್ವ ಇಲ್ಲದಿರುವುದು ದುರಂತ ಸಂಗತಿ. ಗಾಂಧಿ ಕಂಡ ಕನಸ್ಸನ್ನು ಮುಂದಿನ ದಿನಗಳಲ್ಲಿ ಕಟ್ಟೋಣ. ಅದನ್ನು ಸಾಕಾರೊಳಿಸಲು ಅವರ ಚಿಂತನೆಗಳು, ತತ್ವಗಳನ್ನು ಅಳವಡಿಸಿಕೊಳ್ಳಬೇಕು ಎಂದರು.

> **ದೇವರು ಸತ್ಯವಲ್ಲ. ಸತ್ಯವೇ ದೇವರು ಎಂದು ಗಾಂಧಿ ತಿಳಿದಿದ್ದರು. ಅವರು ಸತ್ಯಕ್ಕಾಗಿ ಬದುಕುತ್ತಿದ್ದರು. ಆದರೆ, ಇಂದಿನ ದಿನಗಳಲ್ಲಿ ಎಲ್ಲೆಡೆ ಅಸತ್ಯವೇ ಮುಂದೆ ಬರುತ್ತಿದ್ದು, ಸತ್ಯಕ್ಕೆ ಹಿನ್ನೆಡೆಯಾಗುತ್ತಿದೆ.**
> **ಪ್ರೊ.ಮಲ್ಲೇಪುರಂ [illegible]**
> **ಕರ್ನಾಟಕ ಸಂಸ್ಕೃತ ವಿವಿ ವಿಶ್ರಾಂತ ಕುಲಪತಿ**

ಗಾಂಧೀಜಿಯವರು ಸತ್ಯ, ಅಹಿಂಸೆ, ಸತ್ಯಾಗ್ರಹ, ಸರ್ವೋದಯ ಈ ನಾಲ್ಕನ್ನು ರೂಢಿಸಿಕೊಂಡಿದ್ದರು. ಗಾಂಧೀಜಿ ಭೌತಿಕವಾಗಿಲ್ಲ. ಆದರೆ, ಅವರ ವಿಚಾರಗಳು ನಮ್ಮೊಳಗಿವೆ. ಅವರನ್ನು ಸದಾ ಸ್ಮರಿಸಬೇಕೆಂದರೆ ಅವರ ಪುಸ್ತಕಗಳನ್ನು ಓದುತ್ತಿರಬೇಕು ಎಂದರು.

ಕಾರ್ಯಕ್ರಮದಲ್ಲಿ ಗಾಂಧೀ ಪ್ರತಿಷ್ಠಾನದ ಅಧ್ಯಕ್ಷ ಜೇರಿಗೆ ಲೋಕೇಶ್, ಪ್ರೊ.ಪಿ.ನಾರಾಯಣಸ್ವಾಮಿ, ಎಸ್.ರಾಮಲಿಂಗೇಶ್ವರ, ಬಿ.ವಿ.ರಾಧಿಕ, ವಿನೋದ ಉಪಸ್ಥಿತರಿದ್ದರು.

 ಮಂಗಳವಾರ, 28, ಮೇ, 2019

# ಗಾಂಧೀಜಿ ಚಿಂತನೆಗಳು ಸಾರ್ವಕಾಲಿಕ



ದತ್ತಿ ಉಪನ್ಯಾಸ ಕಾರ್ಯಕ್ರಮವನ್ನು ದೀಪ ಬೆಳಗಿಸುವ ಮೂಲಕ ವೂಡೇ.ಪಿ.ಕೃಷ್ಣ, ಮಲ್ಲೇಪುರಂ ಜಿ. ವೆಂಕಟೇಶ್, ಲೋಕೇಶ್ ಮತ್ತಿತರರು ಉದ್ಘಾಟಿಸಿದರು.

ಸಂ.ಕ.ಸಮಾಚಾರ ಬೆಂಗಳೂರು

ಮನುಷ್ಯ ಯಾಂತ್ರಿಕ ಬದುಕಿಗೆ ಒಗ್ಗಿಕೊಂಡಂತೆ ತನ್ನಲ್ಲಿನ ಸೃಜನಶೀಲತೆಯನ್ನು ಕಡೆಗಣಿಸುತ್ತಿದ್ದಾನೆ ಎಂದು ಸಂಸ್ಕೃತ ವಿಶ್ವವಿದ್ಯಾಲಯದ ವಿಶ್ರಾಂತ ಕುಲಪತಿ ಮಲ್ಲೇಪುರಂ ಜಿ.ವೆಂಕಟೇಶ್ ಬೇಸರ ವ್ಯಕ್ತಪಡಿಸಿದರು.

ಶೇಷಾದ್ರಿಪುರಂನ ಆವರಣದಲ್ಲಿ ಗಾಂಧೀ ಶಾಂತಿ ಪ್ರತಿಷ್ಠಾನ, ಗಾಂಧೀ ಅಧ್ಯಯನ ಕೇಂದ್ರ ಸಂಯುಕ್ತಾಶ್ರಯದಲ್ಲಿ ಆಯೋಜಿಸಿದ್ದ ಸತ್ಯವ್ರತ ಸ್ಮಾರಕ ದತ್ತಿ ಉಪನ್ಯಾಸ ಕಾರ್ಯಕ್ರಮದಲ್ಲಿ ಮಾತನಾಡಿ, ಗಾಂಧೀಜಿ ಅವರ ಮಾತುಗಳು, ಚಿಂತನೆಗಳು, ಸಾರ್ವಕಾಲಿಕ, ಸಾರ್ವಜನಿಕವಾದದ್ದು ಎಂದರು.

ಎಲ್ಲರೂ ಸಾಧನೆ ಮಾಡಬಹುದು. ಆದರೆ ಸಾಧನೆ ಮಾಡಲು ಆಸೆ, ಆಕಾಂಕ್ಷೆ, ಅಪೇಕ್ಷೆಗಳನ್ನು ಬಿಡಬೇಕಾಗುತ್ತದೆ. ವಿದ್ಯಾರ್ಥಿಗಳು ಸ್ವಾವಲಂಬಿಗಳಾಗಬೇಕು. ಸ್ವಾವಲಂಬಿಯಾಗಿ ಜೀವನ ಸಾಗಿಸಿದಾಗಲೇ ಬದುಕಿಗೆ ನಿಜವಾದ ಅರ್ಥಸಿಗುವುದು ಎಂದು ವಿದ್ಯಾರ್ಥಿಗಳಿಗೆ ಕಿವಿಮಾತು ಹೇಳಿದರು.

ಕರ್ನಾಟಕ ಗಾಂಧೀ ಸ್ಮಾರಕ ನಿಧಿಯ ಅಧ್ಯಕ್ಷ ವೂಡೇ ಪಿ.ಕೃಷ್ಣ ಮಾತನಾಡಿ, ಸಾಮಾನ್ಯವಾಗಿ ಎಲ್ಲರೂ ಆಹಾರ, ಬಟ್ಟೆ, ವಸತಿ ಬಗ್ಗೆಯೇ ಯೋಚಿಸುತ್ತೇವೆ. ಇದರ ಜೊತೆಗೆ ಒಳ್ಳೆಯ ಚಿಂತನೆಗಳನ್ನು ರೂಢಿಸಿಕೊಳ್ಳಿ. ಈ ರೀತಿಯ ಆಲೋಚನೆಗಳು ಬರಬೇಕಾದರೆ ಗಾಂಧಿ, ಅಂಬೇಡ್ಕರ್, ಬುದ್ಧ ಇಂತವರ ವಿಚಾರಗಳನ್ನು ತಿಳಿಯಬೇಕು ಎಂದರು.

ಗಾಂಧೀಜಿ ಕೇವಲ ಸ್ವಾತಂತ್ರ್ಯ ಮಾತ್ರ ತಂದುಕೊಟ್ಟಿಲ್ಲ. ಅವರು ಅಹಿಂಸಾತ್ಮಕ ಸಮಾಜ ಕಟ್ಟಬೇಕೆಂದು ಬಯಸಿದರು. ಅವರನ್ನು ತಿಳಿಯಬೇಕಾದರೆ ಅವರ ವಿಚಾರಗಳನ್ನು ಅರಿಯಬೇಕು. ಅವರ ತತ್ವಗಳೆಂದರೆ ಸತ್ಯ, ಅಹಿಂಸೆ, ಸತ್ಯಾಗ್ರಹ, ಸರ್ವೋದಯ ಈ ಅಂಶಗಳನ್ನು ಜೀವನದಲ್ಲಿ ಅಳವಡಿಸಿಕೊಂಡು ಬದುಕಿದವರು ಎಂದರು. ವಿದ್ಯಾರ್ಥಿಗಳು, ಲೋಕೇಶ್, ಪಿ.ನಾರಾಯಣಸ್ವಾಮಿ, ಎಸ್.ರಾಮಲಿಂಗೇಶ್ವರ, ಬಿ.ವಿ.ರಾಧಿಕ ಮತ್ತಿತರರಿದ್ದರು.

ಈ ಸಂಜೆ

ಸೋಮವಾರ
27-05-2019

# ವಿಶೇಷ ಆಕರ್ಷಣೆ ವ್ಯಕ್ತಿತ್ವವುಳ್ಳವರು ಗಾಂಧೀಜಿ

**ಬೆಂಗಳೂರು, ಮೇ 27-** ರಾಷ್ಟ್ರಪಿತ ಗಾಂಧೀಜಿಯವರಿಗೆ ವಿಶೇಷ ಆಕರ್ಷಣೆ ಶಕ್ತಿಯಿತ್ತು. ಸಾವಿರಾರು ಜನರ ನಡುವೆಯೂ ಅವರಲ್ಲಿ ಆಕರ್ಷಿಸುವ ಶಕ್ತಿ ಇತ್ತು. ಸತ್ಯ, ಅಹಿಂಸೆ, ಸತ್ಯಾಗ್ರಹ, ಸರ್ವೋದಯ ಈ ನಾಲ್ಕು ಅಂಶಗಳಿಂದ ರಾಷ್ಟ್ರಪಿತರಾಗಿದ್ದವರು ಎಂದು ವಿದ್ವಾಂಸ ಮಲ್ಲೇಪುರಂ ಜಿ.ವೆಂಕಟೇಶ್ ಹೇಳಿದರು.

ಶೇಷಾದ್ರಿಪುರ ಕಾಲೇಜಿನಲ್ಲಿ ನಡೆದ ಸತ್ಯವ್ರತ ಸ್ಮಾರಕ ದತ್ತಿ ಕಾರ್ಯಕ್ರಮದಲ್ಲಿ ಮಾತನಾಡಿದ ಅವರು, ಮಹಾತ್ಮ ಗಾಂಧೀಜಿಯವರು ಪರಸ್ಪರ ವಿರೋಧಿಗಳಿಂದ ಮುಕ್ತವಾಗಿದ್ದರು. ಮೊದಲು ದೇವರು ಸತ್ಯ ಎಂದ ಅವರು, ಅದು ಮುಂದಿನ ಜೀವನದ ಅನುಭವಗಳಲ್ಲಿ ಸತ್ಯವೇ ದೇವರು ಎಂದರು.



ಕಾಯ, ವಾಚ, ಮನಸುಗಳಿಂದ ಹಿಂಸೆ ಮಾಡದೆ ಬದುಕಿದವರು, ಸರಳ ಜೀವನ ಅಳವಡಿಸಿಕೊಂಡು, ದೇಶಿಯ ಉಡುಪು, ಪದಾರ್ಥಗಳನ್ನು ಬಳಸಿ ಬದುಕಿದವರು. ಸತ್ಯ, ಅಹಿಂಸೆ, ಸತ್ಯಾಗ್ರಹ, ಸರ್ವೋದಯ ನಾಲ್ಕು ಅಂಶಗಳಿಂದ ಅವರ ವ್ಯಕ್ತಿತ್ವ ರೂಪುಗೊಂಡಿತು. ಗಾಂಧೀಜಿಯವರು ಬಹುತ್ವ ಕಲ್ಪನೆವುಳ್ಳವರಾಗಿದ್ದರು ಎಂದು ಹೇಳಿದರು.

ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ಹಾಗೂ ಶೇಷಾದ್ರಿಪುರಂ ಕಾಲೇಜಿನ ಕಾರ್ಯದರ್ಶಿ ಡಾ. ವೂಡೇ ಪಿ.ಕೃಷ್ಣ ಮಾತನಾಡಿ, ಸತ್ಯವ್ರತರು ನಿಷ್ಠಾವಂತ ಗಾಂಧೀಜಿಯವರ ಚಿಂತನೆಗಳ ಅನುಯಾಯಿಗಳು. ಅವರ ಅನೇಕ ಕೃತಿಗಳಲ್ಲಿ ಗಾಂಧೀಜಿ ಯೋಚನೆ, ಆಲೋಚನೆಗಳನ್ನು ರೂಢಿಸಿಕೊಂಡು ಸರಳವಾಗಿ ಬದುಕನ್ನು ಕಟ್ಟಿಕೊಂಡರು. ಪ್ರಕೃತಿ ಚಿಕಿತ್ಸೆಯಲ್ಲಿ ಹೆಚ್ಚು ಆಸಕ್ತಿಯುಳ್ಳವರು ಎಂದರು.

ಗಾಂಧಿ, ಅಂಬೇಡ್ಕರ್ ಅವರ ಚಿಂತನೆಗಳನ್ನು ನಾವು ಪಾಲಿಸಬೇಕು. ಗಾಂಧೀಜಿಯವರ ಬದುಕು ಪಾರದರ್ಶಕವಾಗಿತ್ತು ಅವರ ಸರಳ ಬದುಕೇ ನಮಗೆ ಮಾರ್ಗದರ್ಶನ ಎಂದು ತಿಳಿಸಿದರು.

ಕಾರ್ಯಕ್ರಮದಲ್ಲಿ ಗಾಂಧೀ ಶಾಂತಿ ಪ್ರತಿಷ್ಠಾನ ಅಧ್ಯಕ್ಷ ಜೇರಿಗೆ ಲೋಕೇಶ್, ಪ್ರಾಂಶುಪಾಲರು ಪ್ರೊ.ಪಿ.ನಾರಾಯಣಸ್ವಾಮಿ ಉಪಸ್ಥಿತರಿದ್ದರು.

ಗಾಯನ ನಡೆಸಿಕೊಟ್ಟ ಮಕ್ಕಳಿಗೆ ಇದೇ ವೇಳೆ ಪ್ರಶಸ್ತಿ ಪ್ರದಾನ ಮಾಡಿ ಸನ್ಮಾನಿಸಲಾಯಿತು.

ನಮ್ಮ ರಾಜ್ಯಪ್ರಗತಿ | ಬಸವ ಜಯಂತಿ ವಿಶೇಷ ಸಂಚಿಕೆ | ಮೇ 25, 2019

# ಗಾಂಧೀಜಿ ಅವರನ್ನು ಅವಮಾನಿಸಿದವರ ವಿರುದ್ಧ ಪ್ರತಿಭಟನೆ



ರಾಷ್ಟ್ರಪಿತ ಮಹಾತ್ಮ ಗಾಂಧಿ ಅವರ ಬಗೆಗೆ ಅವಹೇಳನಕಾರಿ ಮಾತುಗಳನ್ನಾಡುತ್ತಿರುವವರ ವಿರುದ್ಧ ಗಾಂಧಿಭವನದಲ್ಲಿ ಸ್ವಾತಂತ್ರ್ಯ ಸೇನಾನಿ ಡಾ.ಎಚ್.ಎಸ್.ದೊರೆಸ್ವಾಮಿ ಅವರ ನೇತೃತ್ವದಲ್ಲಿ ಗಾಂಧಿವಾದಿಗಳು ಸತ್ಯಾಗ್ರಹ ನಡೆಸಿದರು. ರಂಗಕರ್ಮಿ ಪ್ರಸನ್ನ, ಜಲತಜ್ಞ ರಾಜೇಂದ್ರ ಸಿಂಗ್, ನ್ಯಾಯವಾದಿ ಪ್ರೊ.ರವಿವರ್ಮಕುಮಾರ್, ಶಿಕ್ಷಣ ತಜ್ಞ ಡಾ.ವೂಡೇ ಪಿ.ಕೃಷ್ಣ, ಅಮರಬಾಮ ಚಿಂತನ ಪತ್ರಿಕೆಯ ಸಂಪಾದಕ ಜೇರಿಗೆ ಲೋಕೇಶ್, ರಂಗಕರ್ಮಿ ಕೆ.ವಿ.ನಾಗರಾಜಮೂರ್ತಿ, ವಿಶ್ರಾಂತ ತಹಸಿಲ್ದಾರ್ ಇಂದಿರಾ ಕೃಷ್ಣಪ್ಪ, ಸಾಹಿತಿ ಸಿಸಿರಾ, ಗಾಯಕ ಯ.ಚಿ. ದೊಡ್ಡಯ್ಯ ಮತ್ತಿತರರು ಭಾಗವಹಿಸಿದ್ದರು.

## ಗಾಂಧಿ ಭವನದ ಮುಂದೆ 'ಸಬ್ ಕೋ ಸನ್ಮತಿ ದೇ ಭಗವಾನ್' ಪ್ರತಿಭಟನೆಯಲ್ಲಿ ಆಗ್ರಹ

# ಗಾಂಧಿ ನಿಂದಕರ ವಿರುದ್ಧ ಹೋರಾಟ

ವಿಕ ಸುದ್ದಿಲೋಕ ಬೆಂಗಳೂರು

ಗಾಂಧೀಜಿಯವರ ಇತಿಹಾಸವನ್ನು ಅರಿಯದೆ ಅವರ ಬಗ್ಗೆ ಅವಹೇಳನಕಾರಿ ಹೇಳಿಕೆಗಳನ್ನು ನೀಡುವುದು ಹಿಂಸೆಯೇ. ಇದರ ವಿರುದ್ಧ ಶಿಸ್ತಿನ ಹೋರಾಟ ಕೈಗೊಳ್ಳಬೇಕು ಎಂಬ ಅಭಿಪ್ರಾಯ ಗಾಂಧಿ ಭವನದಲ್ಲಿ ವ್ಯಕ್ತವಾಯಿತು. ಇಂತಹ ಹೇಳಿಕೆ ನೀಡುವವರ ವಿರುದ್ಧ ಕಾನೂನು ಕ್ರಮ ಕೈಗೊಳ್ಳುವಂತೆ ಸರಕಾರಕ್ಕೆ ಮನವಿ ಸಲ್ಲಿಸಲು ತೀರ್ಮಾನಿಸಲಾಯಿತು.

ಇತ್ತೀಚೆಗೆ ಸಾಮಾಜಿಕ ಜಾಲತಾಣ ಮತ್ತು ಮಾಧ್ಯಮಗಳಲ್ಲಿ ಮಹಾತ್ಮ ಗಾಂಧೀಜಿ ಕುರಿತಾದ ಅವಹೇಳನಕಾರಿ ಸುದ್ದಿಗಳು ಬಿತ್ತರವಾಗುತ್ತಿರುವುದನ್ನು ಖಂಡಿಸಿ ಕರ್ನಾಟಕ ಗಾಂಧಿ ಸ್ಮಾರಕ ನಿಧಿಯು ಗಾಂಧಿ ಭವನದಲ್ಲಿ ಏರ್ಪಡಿಸಿದ್ದ 'ಸಬ್ ಕೋ ಸನ್ಮತಿ ದೇ ಭಗವಾನ್' ಸಾಂಕೇತಿಕ ಮೌನ ಪ್ರತಿಭಟನೆಯಲ್ಲಿ ಸೋಮವಾರ ಈ ಅಭಿಪ್ರಾಯ ವ್ಯಕ್ತವಾಯಿತು. ನಾನಾ ಹೋರಾಟಗಾರರು, [illegible], ವಿದ್ಯಾರ್ಥಿಗಳು, ಜಲ ತಜ್ಞರು ಸೇರಿದಂತೆ ಹಲವರು ಪ್ರತಿಭಟನೆಯಲ್ಲಿ ಭಾಗವಹಿಸಿದ್ದರು.

ಸ್ವಾತಂತ್ರ್ಯ ಹೋರಾಟಗಾರ ಎಚ್.ಎಸ್. ದೊರೆಸ್ವಾಮಿ ಮಾತನಾಡಿ, ''ಗಾಂಧೀಜಿ ಅವರ ಇತಿಹಾಸ ಮತ್ತು ಜೀವನ ಚರಿತ್ರೆಯನ್ನು ಅರಿಯದೆ ಅವರ ಬಗ್ಗೆ ಅವಹೇಳನಕಾರಿ ಹೇಳಿಕೆಗಳನ್ನು ನೀಡುವ ಮೂಲಕ ಬಿಜೆಪಿ ಮತ್ತು ಆರ್‌ಎಸ್‌ಎಸ್ ಸಮಾಜದಲ್ಲಿ ವಿಷ ಬೀಜ ಬಿತ್ತುತ್ತಿವೆ. ನಾಥೂರಾಮ್ ಗೋಡ್ಸೆ ಪುಸ್ತಕ ಬಂದಿದೆ. ಅದರಲ್ಲಿ ಆತ, ಗಾಂಧೀಜಿಯವರು ಮಹಮ್ಮದೀಯರ ಪರವಾಗಿ ಇರುವುದರಿಂದ ಕೊಲೆ ಮಾಡಿದೆ ಎನ್ನುತ್ತಾರೆ. ಆದರೆ ಇದರಲ್ಲಿ ಸತ್ಯ ಇಲ್ಲ. ಗೋಡ್ಸೆ, ಗಾಂಧೀಜಿ ಮಾತ್ರವಲ್ಲದೆ, ಸತ್ಯವನ್ನು ಕಗ್ಗೊಲೆ ಮಾಡಿದ. ಆದರೆ, ಕೆಲವರು ತಪ್ಪನ್ನು ಸಮರ್ಥನೆ ಮಾಡಿಕೊಳ್ಳುತ್ತಾರೆ. ಇನ್ನು ಕೆಲವರು ಗಾಂಧೀಜಿ ಅವರ ವಿರುದ್ಧ ಹೇಳಿಕೆಗಳನ್ನು ಕೊಡುತ್ತಾ ವಿಷ ಹರಡುತ್ತಿದ್ದಾರೆ. ಯಾರೂ ಕೂಡ ಇತಿಹಾಸವನ್ನು ಬದಲಾಯಿಸುವ ದುಸ್ಸಾಹಸಕ್ಕೆ ಕೈ ಹಾಕಬೇಡಿ,'' ಎಂದು ಎಚ್ಚರಿಕೆ ನೀಡಿದರು.



ಮಹಾತ್ಮ ಗಾಂಧೀಜಿ ಹತ್ಯೆ ಕುರಿತು ನೀಡಿದ ಹೇಳಿಕೆಗಳ ವಿರುದ್ಧ ಕರ್ನಾಟಕ ಗಾಂಧಿ ಸ್ಮಾರಕ ನಿಧಿಯಿಂದ ಬೆಂಗಳೂರಿನ ಗಾಂಧಿ ಭವನ ಆವರಣದಲ್ಲಿ ಪ್ರತಿಭಟನೆ ನಡೆಯಿತು. ಎಚ್.ಎಸ್.ದೊರೆಸ್ವಾಮಿ, ರಂಗಕರ್ಮಿ ಪ್ರಸನ್ನ, ಗಾಂಧಿಭವನ ಅಧ್ಯಕ್ಷ ಡಾ.ವೂಡೆ ಪಿ.ಕೃಷ್ಣ ಪಾಲ್ಗೊಂಡಿದ್ದರು.

> ಒಂದೆಡೆ ಕೆಲವರು ಗಾಂಧೀಜಿಯನ್ನು ನಿಂದಿಸುತ್ತಿದ್ದಾರೆ. ಮತ್ತೊಂದೆಡೆ ಸಮಾಜದ ಜನ ಲಕ್ವ ಹೊಡೆದವರಂತೆ ಮಲಗಿದ್ದಾರೆ. ಇಂತಹ ಸಂದರ್ಭದಲ್ಲಿ ಗಾಂಧಿ ಭವನ ಒಂದು ಉತ್ತಮ ಹೋರಾಟ ರೂಪಿಸಿದೆ. ಇದು ಸಾತ್ವಿಕ ಹೋರಾಟವಾಗದೆ ಉಗ್ರ ಸ್ವರೂಪದ ಹೋರಾಟವಾಗಬೇಕು.
>
> **- ಪ್ರೊ. ರವಿವರ್ಮಕುಮಾರ್**, ಮಾಜಿ ಅಡ್ವೊಕೇಟ್ ಜನರಲ್

ರಂಗಕರ್ಮಿ ಪ್ರಸನ್ನ ಹೆಗ್ಗೋಡು ಮಾತನಾಡಿ, ''ಗಾಂಧಿ ಹಾಗೂ ಗೋಡ್ಸೆ ಇಬ್ಬರೂ ರಾಮನ ಭಕ್ತರೆ. ಆದರೂ ಗೋಡ್ಸೆ ಗಾಂಧೀಜಿಯನ್ನು ಕಗ್ಗೊಲೆ ಮಾಡಿದ. ರಾಮ ರಾಜ್ಯದ ಕುರಿತು ಇಬ್ಬರ ಕಲ್ಪನೆ ಭಿನ್ನವಾಗಿತ್ತು. ಗಾಂಧಿಯವರದ್ದು ಗ್ರಾಮಾಭಿವೃದ್ಧಿ,ರಾಮ ರಾಜ್ಯ ಕಲ್ಪನೆಯಾದರೆ, ಗೋಡ್ಸೆಯದ್ದು ಪುರೋಹಿತಶಾಹಿ, ಬ್ರಾಹ್ಮಣೀಯ ರಾಮ ರಾಜ್ಯದ ಕಲ್ಪನೆಯಾಗಿತ್ತು. ಹೀಗಾಗಿ, ನಾವು ಯಾವ ಕಲ್ಪನೆ ಇಂದು ನಮ್ಮ ದೇಶಕ್ಕೆ ಅವಶ್ಯಕ ಎಂದುದನ್ನು ಅರ್ಥಮಾಡಿಕೊಂಡು ಮುಂದೆ ಸಾಗಬೇಕು. ಅದು ಬಿಟ್ಟು ಗಾಂಧೀಜಿಯವರ ಪ್ರತಿಮೆಗಳನ್ನು ಧ್ವಂಸ ಮಾಡುವುದು, ಅವರನ್ನು ನಿಂದಿಸುವುದು ಸರಿಯಲ್ಲ,'' ಎಂದರು.

ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ಡಾ. ವೂಡೇ ಪಿ. ಕೃಷ್ಣ ಮಾತನಾಡಿ, ''ಭಾರತ ಎಂದರೆ ಗಾಂಧಿ. ಗಾಂಧಿ ಎಂದರೆ ಭಾರತ' ಎನ್ನುವ ಕೂಗು ದುಟ್ಟವಾಗಿದೆ. ಹೀಗಾಗಿ, ಯುವ ಸಮುದಾಯ ಮೊದಲು ಗಾಂಧಿ ಕುರಿತು ಓದಿಕೊಳ್ಳಬೇಕು. ಗಾಂಧೀಜಿ ಅವರನ್ನು ಓದಿಕೊಂಡರೆ ನಿಜಕ್ಕೂ ರಾಷ್ಟ್ರಭಕ್ತರಾಗುತ್ತೀರಿ. ಗಾಂಧಿಯಂತೆ ಆಲೋಚನೆ ಮಾಡಿದರೆ ಸಾಕು ಸಮಾಜ ಅಭಿವೃದ್ಧಿಯ ದಿಕ್ಕಿನತ್ತ ಸಾಗುತ್ತದೆ,'' ಎಂದರು.

ಗಾಂಧಿ ಭವನದ ಗೌರವ ಕಾರ್ಯದರ್ಶಿ ಇಂದಿರಾ ಕೃಷ್ಣಪ್ಪ, ಕಾರ್ಯದರ್ಶಿ ಸಿಸಿರಾ, ಜಲತಜ್ಞ ರಾಜೇಂದ್ರ ಸಿಂಗ್, ವಿಮರ್ಶಕ ಬೈರಮಂಗಲ ರಾಮೇಗೌಡ, ಗಾಂಧಿ ಶಾಂತಿ ಪ್ರತಿಷ್ಠಾನದ ಅಧ್ಯಕ್ಷ ಜೇರಿಗೆ ಲೋಕೇಶ್ ಮತ್ತಿತರರು ಭಾಗವಹಿಸಿದ್ದರು.

ಸಂಯುಕ್ತ ಕರ್ನಾಟಕ

ಬೆಂಗಳೂರು | 21 ಮೇ 2019 |

# ಗಾಂಧಿ ನಿಂದಕರ ವಿರುದ್ಧ ಸ್ವಾತಂತ್ರ್ಯ ಯೋಧರ ಕಿಡಿ

ಸಂ.ಕ. ಸಮಾಚಾರ, ಬೆಂಗಳೂರು

ರಾಷ್ಟ್ರಪಿತ ಮಹಾತ್ಮಾ ಗಾಂಧೀಜಿ ಬಗ್ಗೆ ಬಿಜೆಪಿ ಮುಖಂಡರು ಮತ್ತು ಸಂಘ ಪರಿವಾರದವರು ನೀಡುತ್ತಿರುವ ಹೇಳಿಕೆಗಳನ್ನು ಯಾವುದೇ ಕಾರಣಕ್ಕೂ ಸಹಿಸಲು ಸಾಧ್ಯವಿಲ್ಲ ಎಂದು ಹಿರಿಯ ಸ್ವಾತಂತ್ರ್ಯ ಹೋರಾಟಗಾರ ಎಚ್.ಎಸ್. ದೊರೆಸ್ವಾಮಿ ಕಿಡಿಕಾರಿದ್ದಾರೆ.

ಗಾಂಧಿ ಭವನದ ಆವರಣದಲ್ಲಿ ವಿವಿಧ ಸಂಘಟನೆಗಳು 'ಸಬ್ ಕೋ ಸನ್ಮತಿ ದೇ ಭಗವಾನ್' ಹೆಸರಿನಲ್ಲಿ ಹಮ್ಮಿಕೊಂಡಿದ್ದ ಮೌನ ಪ್ರತಿಭಟನೆ ಸಂದರ್ಭದಲ್ಲಿ ಮಾತನಾಡಿ ಬಿಜೆಪಿ ಮತ್ತು ಆರ್ ಎಸ್ಎಸ್ ರಾಜಕೀಯ ಲಾಭಕ್ಕಾಗಿ ಇತಿಹಾಸ ತಿರುಚುವ ಪ್ರಯತ್ನ ಮಾಡುತ್ತಿವೆ. ಇಂತಹ ಕೃತ್ಯವನ್ನು ಸಹಿಸಲು ಸಾಧ್ಯವಿಲ್ಲ. ಗಾಂಧೀಜಿ ಬಗ್ಗೆ ಮಾತನಾಡುವ ಮೊದಲು ಅವರು ನಡೆಸಿದ ಹೋರಾಟ, ತ್ಯಾಗ, ಬಲಿದಾನದ ಬಗ್ಗೆ ಅರಿತುಕೊಳ್ಳಲಿ ಎಂದು ಹೇಳಿದರು.

ಗಾಂಧಿ ಹತ್ಯೆಗೈದ ನಾಥುರಾಮ್ ಗೋಡ್ಸೆ ಸಂಘ ಪರಿವಾರಕ್ಕೆ ಸೇರಿದವನಲ್ಲ ಎಂದು ಪ್ರಧಾನಿ ನರೇಂದ್ರ ಮೋದಿ ಹೇಳುತ್ತಾರೆ. ಆದರೆ, ನಾಥುರಾಮ್ ಗೋಡ್ಸೆಯು ಗಾಂಧೀಜಿಯವರನ್ನು ಹತ್ಯೆಗೈಯುವ ಪೂರ್ವದಲ್ಲಿ ಬೆಂಗಳೂರಿನಲ್ಲಿ ನಡೆದ ಆರ್ಎಸ್ಎಸ್ ಕಾರ್ಯಕ್ರಮದಲ್ಲಿ ಪಾಲ್ಗೊಂಡಿದ್ದ. ಗಾಂಧೀಜಿಯ ಹತ್ಯೆಗೂ ಕೇವಲ ಹದಿನೈದು ದಿನಗಳ ಅಂತರದಲ್ಲಿ ಈ ಕಾರ್ಯಕ್ರಮ ನಡೆದಿತ್ತು.

ನರೇಂದ್ರ ಮೋದಿಯವರಿಗೆ ಇತಿಹಾಸದ ಅರಿವಿಲ್ಲ. ಹೀಗಾಗಿ ತಿಳಿಯದೇ ಮಾತನಾಡುವ ಮೂಲಕ ಇತಿಹಾಸ ತಿರುಚುವ ಪ್ರಯತ್ನ ಮಾಡುತ್ತಿದ್ದಾರೆ. ಬಿಜೆಪಿ ಮತ್ತು ಆರ್ಎಸ್ಎಸ್ ತಮಗಿಷ್ಟ ಬಂದಂತೆ ಮಾತನಾಡುವ ಮೂಲಕ ಇತಿಹಾಸ ತಿರುಚುವ ಪ್ರಯತ್ನ ಮಾಡುತ್ತಿದ್ದಾರೆ. ಯಾರು ಏನೇ ಹೇಳಿದರೂ, ಗಾಂಧೀಜಿ ವಿರೋಧಿ ಹೇಳಿಕೆಗಳನ್ನು ಸಹಿಸಿಕೊಳ್ಳಲು ಸಾಧ್ಯವಿಲ್ಲ. ಗಾಂಧೀಜಿ ವಿರೋಧಿ ಹೇಳಿಕೆ ಸಹಿಸಿಕೊಳ್ಳುವುದು ಅಸಹ್ಯ. ಭಾರತದಲ್ಲಿ ಗಾಂಧೀಜಿ ಹುಟ್ಟುಹಾಕಿದ ಸಂಸ್ಕೃತಿ ಅಳಿಸಲು ಯಾರಿಂದಲೂ ಸಾಧ್ಯವಿಲ್ಲ ಎಂದು ಹೇಳಿದರು.'




ಬಿಜೆಪಿ ಮತ್ತು ಆರ್ಎಸ್ಎಸ್ ಸಂಘಟನೆ ರಾಷ್ಟ್ರಪಿತ ಮಹಾತ್ಮಾ ಗಾಂಧೀಜಿ ಅವರನ್ನು ಅವಹೇಳನ ಮಾಡುತ್ತಿರುವುದನ್ನು ಖಂಡಿಸಿ ವಿವಿಧ ಸಂಘ-ಸಂಸ್ಥೆಗಳು ಹಿರಿಯ ಗಾಂಧೀವಾದಿ ಎಚ್ಎಸ್ ದೊರೆಸ್ವಾಮಿ ನೇತೃತ್ವದಲ್ಲಿ ಗಾಂಧಿ ಭವನದ ಆವರಣದಲ್ಲಿ 'ಸಬ್ ಕೋ ಸನ್ಮತಿ ದೇ ಭಗವಾನ್' ಹೆಸರಿನಲ್ಲಿ ಮೌನ ಪ್ರತಿಭಟನೆ ನಡೆಸಿದರು. ಈ ಸಂದರ್ಭದಲ್ಲಿ ಹಿರಿಯ ರಂಗಕರ್ಮಿ ಪ್ರಸನ್ನ ಹೆಗ್ಗೋಡು, ಹಿರಿಯ ವಕೀಲ ರವಿವರ್ಮಕುಮಾರ್, ಸಾಹಿತಿ ಡಾ. ಬೈರಮಂಗಲ ರಾಮೇಗೌಡ, ಜಲತಜ್ಞ ರಾಜೇಂದ್ರಂಗ್, ಗಾಂಧಿಭವನ ಗೌರವ ಕಾರ್ಯದರ್ಶಿ ಇಂದಿರಾ ಕೃಷ್ಣಪ್ಪ ಮತ್ತಿತರರಿದ್ದರು.

ಹಿರಿಯ ರಂಗಕರ್ಮಿ ಹೆಗ್ಗೋಡು ಪ್ರಸನ್ನ ಮಾತನಾಡಿ, ಗಾಂಧೀಜಿ ಮತ್ತು ಗೋಡ್ಸೆ ಇಬ್ಬರೂ ಶ್ರೀರಾಮನ ಭಕ್ತರು. ಗಾಂಧೀಜಿಯವರದ್ದು ಗ್ರಾಮ ಅಭಿವೃದ್ಧಿಯ ಮೂಲಕ ರಾಮರಾಜ್ಯದ ಪರಿಕಲ್ಪನೆ. ಗೋಡ್ಸೆಯ ಕಲ್ಪನೆ ಪುರೋಹಿತಶಾಹಿ ಬ್ರಾಹ್ಮಣೀಕರಣದ ಕಲ್ಪನೆ. ಹೀಗೆ ಇಬ್ಬರೂ ಬೇರೆಬೇರೆ ರೀತಿಯ ಕಲ್ಪನೆಯ ದಾರಿಗೆ ಸೇರಿದವರು. ಆದರೆ, ನಮಗೆ ಯಾವ ಕಲ್ಪನೆ ನಮ್ಮ ದೇಶಕ್ಕೆ ಅವಶ್ಯಕ ಎಂಬುದನ್ನು ಅರಿತುಕೊಂಡು ಮುಂದಡಿ ಇಡಬೇಕಾಗಿದೆ. ಗಾಂಧೀಜಿಯ ಮೂರ್ತಿ ಧ್ವಂಸಗೊಳಿಸುವುದು, ಅವಹೇಳನಕಾರಿ ಮಾತು ಮತ್ತು ಸತ್ಯದ ವಿರೋಧಿ ನಡೆಯೇನಲ್ಲ ಎಂದು ಹೇಳಿದರು.

ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ಡಾ.ವೂಡೇ ಪಿ. ಕೃಷ್ಣ ಮಾತನಾಡಿ, ಗಾಂಧೀಜಿ ಜೀವನ ಬಲ್ಲವರಿಗೆ ಅವರು ಅರ್ಥವಾಗುತ್ತಾರೆ. ಭಾರತ ಎಂದರೆ ಗಾಂಧಿ. ಯುವ ಸಮುದಾಯ ಮೊದಲು ಗಾಂಧಿ ಕುರಿತು ಓದಿಕೊಳ್ಳಬೇಕು ಎಂದು ಹೇಳಿದರು.

ಈ ಸಂದರ್ಭದಲ್ಲಿ ಮಾಜಿ ಅಡ್ವೋಕೇಟ್ ಜನರಲ್ ಪ್ರೊ ರವಿವರ್ಮಕುಮಾರ್, ಸಾಹಿತಿ ಡಾ.ಬೈರಮಂಗಲರಾಮೇಗೌಡ, ಗಾಂಧಿ ಭವನ ಗೌರವ ಕಾರ್ಯದರ್ಶಿ ಇಂದಿರಾ ಕೃಷ್ಣಪ್ಪ, ಜಲ ತಜ್ಞ ರಾಜೇಂದ್ರ ಸೇರಿದಂತೆ ಹಲ ಪ್ರಮುಖರು ಉಪಸ್ಥಿತರಿದ್ದರು.

### [illegible]

ದೇಶ ಇಬ್ಭಾಗವಾಗಲು ಗಾಂಧೀಜಿ ಕಾರಣ ಎಂದು ಬಿಂಬಿಸುತ್ತಿರುವುದು ಅತ್ಯಂತ ನಾಚಿಗೇಡಿತನದ ವಿಷಯ. ಗಾಂಧೀಜಿ ಹೆಸರಿನಲ್ಲಿ ಬಿಜೆಪಿ, ಆರ್ಎಸ್ಎಸ್ ಸಮಾಜದಲ್ಲಿ ವಿಷಬೀಜ ಬಿತ್ತುವ ಪ್ರಯತ್ನ ಮಾಡುತ್ತಿದೆ. ಆರ್ಎಸ್ಎಸ್‌ನ ಸಾವರ್ಕರ್ ನೀಡಿದ ಉಪದೇಶದಿಂದಾಗಿಯೇ ಗೋಡ್ಸೆಯು ಗಾಂಧೀಜಿಯವರನ್ನು ಹತ್ಯೆಗೈದ.

–ಎಚ್.ಎಸ್.ದೊರೆಸ್ವಾಮಿ, ಹಿರಿಯ ಗಾಂಧೀವಾದಿ

# ‘ಬಿಜೆಪಿಯಿಂದ ದೇಶದಲ್ಲಿ ಹಿಂಸಾತ್ಮಕ ಚಿಂತನೆಗಳು’

## ಸಬ್ ಕೋ ಸನ್ಮತಿ ದೇ ಭಗವಾನ್ ಮೌನ ಸತ್ಯಾಗ್ರಹದಲ್ಲಿ ಎಚ್.ಎಸ್.ದೊರೆಸ್ವಾಮಿ

ಬೆಂಗಳೂರು, ಮೇ 20: ಬಿಜೆಪಿಗೆ ಶಾಂತಿ, ಅಹಿಂಸೆ ಹಾಗೂ ಸಮಾನತೆ ಬೇಕಿಲ್ಲ. ಸಮಾಜದಲ್ಲಿ ಜಾತಿ ಭೇದಭಾವ ಮಾಡುವಂತಹ, ದೇಶದ ಸಂಪತ್ತು ಕೆಲವೇ ವರ್ಗಗಳಿಗೆ ಮಾತ್ರ ಮೀಸಲಿಡುವಂತಹ ಅಸಮಾನ ವ್ಯವಸ್ಥೆ ಬೇಕಿದೆ. ಹೀಗಾಗಿಯೇ ಬಿಜೆಪಿ ನಾಯಕರಿಗೆ ಗೋಡ್ಸೆ ಚಿಂತನೆಗಳು ಮಾದರಿಯಾಗಿವೆ ಎಂದು ಹಿರಿಯ ಸ್ವಾತಂತ್ರ್ಯ ಹೋರಾಟಗಾರ ಎಚ್.ಎಸ್.ದೊರೆಸ್ವಾಮಿ ಆತಂಕ ವ್ಯಕ್ತಪಡಿಸಿದರು.

ಸೋಮವಾರ ಕರ್ನಾಟಕ ಗಾಂಧಿ ಸ್ಮಾರಕ ನಿಧಿ ವತಿಯಿಂದ 'ಗಾಂಧಿ ಭವನ ಆವರಣದಲ್ಲಿ ಆಯೋಜಿಸಿದ್ದ, ಸಬ್ ಕೋ ಸನ್ಮತಿ ದೇ ಭಗವಾನ್ ಮೌನ ಸತ್ಯಾಗ್ರಹದ ನೇತೃತ್ವವಹಿಸಿ ಮಾತನಾಡಿದ ಅವರು, ದೇಶದಲ್ಲಿ ಬಿಜೆಪಿ ಹಿಂಸಾತ್ಮಕ ಕಾರ್ಯಗಳನ್ನು ಹೆಚ್ಚಿಸುವ ನಿಟ್ಟಿನಲ್ಲಿ ಕಾರ್ಯಪ್ರವೃತ್ತವಾಗಿದೆ. ಹೀಗಾಗಿ ನಾಥೂರಾಮ್ ಗೋಡ್ಸೆಯನ್ನು ವೈಭವೀಕರಿಸಲು ಮುಂದಾಗಿದೆ ಎಂದು ಆಪಾದಿಸಿದರು.

ಬಿಜೆಪಿ ಹಾಗೂ ಆರೆಸ್ಸೆಸ್ ಯುವ ಜನತೆಯನ್ನು ಬಳಸಿಕೊಂಡು ಸಮಾಜದಲ್ಲಿ ವಿಷ ಹರಡುವುದರಲ್ಲಿ ತೊಡಗಿವೆ. ಹೀಗಾಗಿ ಯುವಜನತೆ ಆರೆಸ್ಸೆಸ್ ಕಾರ್ಯಚಟುವಟಿಕೆಗಳಲ್ಲಿ ಭಾಗವಹಿಸಬಾರದು. ಅವರು ಹೇಳುವ ಹಸಿ ಸುಳ್ಳುಗಳಿಗೆ ಕಿವಿಗೊಟ್ಟು ಸಮಾಜಘಾತಕ ಕೃತ್ಯಗಳಲ್ಲಿ ತೊಡಗಬಾರದು. ಈ ನಿಟ್ಟಿನಲ್ಲಿ ಜನಪರ ಸಂಘಟನೆಗಳ ಕಾರ್ಯ ದೊಡ್ಡದಿದೆ ಎಂದು ಅವರು ಹೇಳಿದರು.

**ಸಾವರ್ಕರ್ ಹೇಡಿ:** ಹಿಂದುತ್ವವಾದಿ ಸಾವರ್ಕರ್ ಜೈಲಿನಿಂದ ಬಿಡುಗಡೆಯಾಗಲು ಬ್ರಿಟಿಷರ ಮುಂದೆ ಅಂಗಲಾಚಿದ್ದ. ಅಷ್ಟೇ ಅಲ್ಲದೆ, ತನ್ನನ್ನು ಬಿಡುಗಡೆಗೊಳಿಸಿದರೆ ಬ್ರಿಟಿಷರಿಗೆ ಯಾವುದೇ ಸಮಸ್ಯೆಯಾಗದಂತೆ ಸಾಮಾಜಿಕ ಚಟುವಟಿಕೆಗಳಲ್ಲಿ ತೊಡಗುತ್ತೇನೆಂದು ಬ್ರಿಟಿಷ್ ಆಡಳಿತಗಾರರಿಗೆ ಪತ್ರ ಬರೆದಿದ್ದ. ಇಂತಹ ಹೇಡಿ ಆರೆಸ್ಸೆಸ್‌ಗೆ ಆದರ್ಶವಾಗಿದ್ದಾನೆ ಎಂದು ಅವರು ಲೇವಡಿ ಮಾಡಿದರು.

ಜಲ ತಜ್ಞ ರಾಜೇಂದ್ರ ಸಿಂಗ್ ಮಾತನಾಡಿ, ವಿಶ್ವಕ್ಕೆ ಅಹಿಂಸಾ ತತ್ವವನ್ನು ಬೋಧಿಸಿದ ಮಹಾತ್ಮಾ ಗಾಂಧೀಜಿಯನ್ನು ಕೊಂದ ನಾಥೂರಾಮ್ ಗೋಡ್ಸೆಯನ್ನು ಬಿಜೆಪಿ ವೈಭವೀಕರಿಸುತ್ತಿದೆ. ಆ ಮೂಲಕ ಪ್ರಧಾನಿ ನರೇಂದ್ರ ಮೋದಿ, ಅಮಿತ್ ಶಾ ಸೇರಿದಂತೆ ಬಿಜೆಪಿಯವರು ನಾಥೂರಾಮ್ ಗೋಡ್ಸೆಗಳ ಪ್ರತಿರೂಪಗಳೇ ಎಂದು ಸಾಬೀತು ಪಡಿಸುತ್ತಿದ್ದಾರೆ. ಆದರೆ, ಇದನ್ನು ಅರ್ಥಮಾಡಿಕೊಳ್ಳುವಲ್ಲಿ ಜನತೆ ಸೋತಿದ್ದಾರೆ ಎಂದು ಅವರು ವಿಷಾದಿಸಿದರು.



ಸಾಮಾಜಿಕ ಜಾಲ ತಾಣದಲ್ಲಿ ಮಹಾತ್ಮಾ ಗಾಂಧಿ ಅವರಿಗೆ ಅವಮಾನ ಮಾಡುತ್ತಿರುವುದನ್ನು ವಿರೋಧಿಸಿ ಬೆಂಗಳೂರಿನ ಗಾಂಧಿ ಭವನದ ಎದುರು ಸೋಮವಾರ ಸ್ವಾತಂತ್ರ್ಯ ಹೋರಾಟಗಾರ ಎಚ್.ಎಸ್. ದೊರೆಸ್ವಾಮಿ, ಪ್ರಸನ್ನ ಹೆಗ್ಗೋಡು, ಎನ್. ಆರ್. ವಿಶುಕುಮಾರ್, ಡಾ.ವೂಡೈ ಪಿ. ಕೃಷ್ಣ, ಪ್ರೊ. ರವಿವರ್ಮ ಕುಮಾರ್ ಹಾಗೂ ಇತರರು ಮೌನ ಪ್ರತಿಭಟನೆ ನಡೆಸಿದರು.

ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ಡಾ.ವೂಡೇ ಪಿ. ಕೃಷ್ಣ ಮಾತನಾಡಿ, ಮಹಾತ್ಮಾ ಗಾಂಧೀಜಿಯ ಚಿಂತನೆಗಳನ್ನು ಹೊರತುಪಡಿಸಿ ಭಾರತವನ್ನು ಊಹಿಸಲು ಸಾಧ್ಯವಿಲ್ಲ. ಅಷ್ಟರ ಮಟ್ಟಿಗೆ ಗಾಂಧಿ ಭಾರತವನ್ನು ಆವರಿಸಿಕೊಂಡಿದ್ದಾರೆ. ಆದರೆ, ಕೆಲವು ಧಾರ್ಮಿಕ ಮೂಲಭೂತವಾದಿಗಳು ಗಾಂಧೀಜಿಯಕುರಿತುಅವಹೇಳನಕಾರಿಯಾಗಿ ಮಾತನಾಡುವುದರ ಮೂಲಕ ಗಾಂಧಿಯನ್ನು ಸಮಾಜದಿಂದ ಮರೆಮಾಚಲು ವಿಫಲ ಪ್ರಯತ್ನ ನಡೆಸುತ್ತಿದ್ದಾರೆ. ಇದು ಎಂದಿಗೂ ಸಾಧ್ಯವಾಗದು ಎಂದು ತಿಳಿಸಿದರು.

9ನೇ ಪುಟಕ್ಕೆ

> ನರೇಂದ್ರ ಮೋದಿಯಷ್ಟು ಸುಳ್ಳು ಹೇಳುವ ಪ್ರಧಾನಿ ದೇಶಮಾತ್ರವಲ್ಲ, ಇಡೀ ವಿಶ್ವದಲ್ಲೇ ಕಂಡುಬರುವುದಿಲ್ಲ. ಇಂತಹ ಪ್ರಧಾನಿಯಿಂದ ನಾವು ಜನಪರವಾದಂತಹ ಯಾವುದೇ ಕಾರ್ಯಯೋಜನೆಗಳನ್ನು ನಿರೀಕ್ಷಿಸಲು ಸಾಧ್ಯವಿಲ್ಲ. ಜನತೆಗೆ ಬಿಜೆಪಿ ಕಪಟ ನೀತಿಗಳ ಕುರಿತು ಜಾಗೃತಿ ಮೂಡಿಸುವುದೊಂದೇ ಪರಿಹಾರ.

> ಮಹಾತ್ಮಾ ಗಾಂಧೀಜಿಗೆ ರಾಮರಾಜ್ಯ ಕಲ್ಪನೆಯೆಂದರೆ ಗ್ರಾಮೀಣಾಭಿವೃದ್ಧಿ, ನಾಥೂರಾಮ್ ಗೋಡ್ಸೆಗೆ ರಾಮರಾಜ್ಯವೆಂದರೆ ಪುರೋಹಿತಶಾಹಿ, ಮನು ಸಿದ್ಧಾಂತ ಮರುಸ್ಥಾಪನೆಯಾಗಿದೆ. ಹೀಗಾಗಿ, ಯುವ ಜನತೆ ನಾವು ಯಾವ ಕಲ್ಪನೆಯ ರಾಮರಾಜ್ಯದ ಕಡೆಗೆ ಹೋಗಬೇಕೆಂಬುದು ನಿರ್ಧರಿಸಿ ಅದರಂತೆ ನಡೆದುಕೊಳ್ಳಬೇಕು.

ಮೊದಲನೆ ಪುಟದಿಂದ...

### ಹಿಂಸಾತ್ಮಕ ಚಿಂತನೆಗಳು

ಮಾಜಿ ಅಡ್ವೊಕೇಟ್ ಜನರಲ್ ಪ್ರೊ.ರವಿವರ್ಮಕುಮಾರ್, ಸಾಹಿತಿ ಡಾ.ಬೈರಮಂಗಲ ರಾಮೇಗೌಡ, ಗಾಂಧಿಭವನದ ಗೌರವ ಕಾರ್ಯದರ್ಶಿ ಇಂದಿರಾ ಕೃಷ್ಣಪ್ಪ ಮೊದಲಾದವರು ಉಪಸ್ಥಿತರಿದ್ದರು.

ಕನ್ನಡಪ್ರಭ ಮಂಗಳವಾರ 21.5.2019

# ಗೋಡ್ಸೆ ಗಾಂಧಿಯನ್ನಲ್ಲದೆ ಸತ್ಯವನ್ನೂ ಹತ್ಯೆಗೈದ

## ಬಿಜೆಪಿ, ಆರೆಸ್ಸೆಸ್ ವಿಷ ಹರಡುವ ಕೆಲಸ ಮಾಡುತ್ತಿದೆ: ಸ್ವಾತಂತ್ರ್ಯ ಹೋರಾಟಗಾರ ದೊರೆಸ್ವಾಮಿ

• ಕನ್ನಡಪ್ರಭ ವಾರ್ತೆ ಬೆಂಗಳೂರು

ಭಾರತೀಯ ಜನತಾ ಪಕ್ಷ ಹಾಗೂ ರಾಷ್ಟ್ರೀಯ ಸ್ವಯಂಸೇವಾ ಸಂಘ, ಗಾಂಧೀಜಿಯನ್ನು ನೆಪ ಮಾಡಿಕೊಂಡು ಸಮಾಜದಲ್ಲಿ ವಿಷ ಹರಡುತ್ತಿವೆ ಎಂದು ಸ್ವಾತಂತ್ರ್ಯ ಹೋರಾಟಗಾರ ಎಚ್.ಎಸ್.ದೊರೆಸ್ವಾಮಿ ಅಸಮಾಧಾನ ವ್ಯಕ್ತಪಡಿಸಿದ್ದಾರೆ.

ನಗರದ ಗಾಂಧಿ ಭವನ ಆವರಣದಲ್ಲಿ ಸೋಮವಾರ ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಹಮ್ಮಿಕೊಂಡಿದ್ದ 'ಸಬ್ ಕೋ ಸನ್ಮತಿ ದೇ ಭಗವಾನ್' ಮೌನ ಸತ್ಯಾಗ್ರಹದಲ್ಲಿ ಪಾಲ್ಗೊಂಡು ಅವರು ಮಾತನಾಡಿದರು.

ಶ್ರೀಸಾಮಾನ್ಯರ ಸೇವೆಯಿಂದಲೇ ಮಹಾತ್ಮ ಎಂದು ಕರೆಸಿಕೊಂಡವರು ಗಾಂಧೀಜಿ. ಹೀಗಿರುವಾಗ ಕೆಲವರು ಸದ್ಯ ರಾಷ್ಟ್ರಪಿತ ಗಾಂಧೀಜಿ ಕುರಿತು ಅವಹೇಳನಕಾರಿ ಹಾಗೂ ಅಸಹನೀಯ ಹೇಳಿಕೆ ನೀಡುತ್ತಿದ್ದಾರೆ. ಗೋಡ್ಸೆ ಕೇವಲ ಗಾಂಧಿಯನ್ನಲ್ಲದೆ ಸತ್ಯವನ್ನೂ ಕಗ್ಗೊಲೆ ಮಾಡಿದ. ಆದರೆ ಆತ ಮಾಡಿದ ತಪ್ಪನ್ನು ಕೆಲವರು ಸಮರ್ಥನೆ ಮಾಡುತ್ತಿದ್ದಾರೆ ಎಂದು ಟೀಕಿಸಿದರು.

ಗೋಡ್ಸೆ ಕುರಿತ ಪುಸ್ತಕದಲ್ಲಿ ಗಾಂಧೀಜಿ ಮುಸ್ಲಿಮರ ಪರ ಇದ್ದ ಕಾರಣಕ್ಕೇ ಅವರನ್ನು ಗೋಡ್ಸೆ ಕೊಲೆ ಮಾಡಿದ ಎಂದು ಬರೆಯಲಾಗಿದೆ. ಅದು ಸತ್ಯವಲ್ಲ. ಯಾರೂ ಸಹ ಇತಿಹಾಸವನ್ನು ಬದಲಾಯಿಸುವ ಅಥವಾ ತಿರುಚುವ ಕೆಲಸ ಮಾಡಬಾರದು ಎಂದ ಅವರು, ಗೋಡ್ಸೆ ಗಾಂಧೀಜಿಯನ್ನು ಹತ್ಯೆ ಮಾಡಿರಬಹುದು ಹೊರತು, ಅವರ ವಿಚಾರಧಾರೆ, ಚಿಂತನೆ, ಸತ್ಯ ಹಾಗೂ ಆದರ್ಶಗಳನ್ನು ಅಲ್ಲ ಎಂದರು.

ಹಿರಿಯ ರಂಗ ಕರ್ಮಿ ಪ್ರಸನ್ನ ಹೆಗ್ಗೋಡು, ಗಾಂಧಿ ಹಾಗೂ ಗೋಡ್ಸೆ ರಾಮನ ಭಕ್ತರೆ, ರಾಮ ರಾಜ್ಯದ ಕುರಿತು ಇಬ್ಬರ ಕಲ್ಪನೆ ವಿಭಿನ್ನವಾಗಿದ್ದವು. ಗಾಂಧೀಜಿಯವರದ್ದು ಗ್ರಾಮಾಭಿವೃದ್ಧಿಯೇ ರಾಮರಾಜ್ಯ ಕಲ್ಪನೆಯಾಗಿತ್ತು. ಗೋಡ್ಸೆಗೆ ಪುರೋಹಿತಶಾಹಿ ಹಾಗೂ ಬ್ರಾಹ್ಮಣಶಾಹಿಯೇ ರಾಮರಾಜ್ಯ ಎಂದು ಭಾವಿಸಿದ್ದರು. ಪ್ರಸ್ತುತ ಯಾವ ಕಲ್ಪನೆ ನಮ್ಮ ದೇಶಕ್ಕೆ ಅಗತ್ಯ ಎಂಬುದನ್ನು ಅರ್ಥಮಾಡಿಕೊಂಡು ಮುಂದೆ ಸಾಗಬೇಕು ಎಂದು ಕಿವಿಮಾತು ಹೇಳಿದ್ದರು.

ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ಡಾ.ವೂಡೇ ಪಿ.ಕೃಷ್ಣ ಮಾತನಾಡಿ, ಕೆಲ ಕಿಡಿಗೇಡಿಗಳು ಸಾಮಾಜಿಕ ಜಾಲತಾಣಗಳಲ್ಲಿ ಗಾಂಧಿ ಕುರಿತು ಅವಹೇಳನ ಹೇಳಿಕೆ ನೀಡುವವರ ಜೊತೆ ಕೆಲ ರಾಜಕೀಯ ಪಕ್ಷಗಳು ಹಾಗೂ ಜನಪ್ರತಿನಿಧಿಗಳು ಕೈಜೋಡಿಸುತ್ತಿರುವುದು ವಿಷಾದನೀಯ. ಈಗಿನ ಯುವ ಸಮುದಾಯ ಗಾಂಧಿ ಕುರಿತು ಓದಿಕೊಂಡಾಗ ಮಾತ್ರ ಸತ್ಯಾಂಶ ತಿಳಿಯಲಿದೆ ಎಂದರು.

ಕಾರ್ಯಕ್ರಮದಲ್ಲಿ ಮಾಜಿ ಅಡ್ವೋಕೇಟ್ ಜನರಲ್ ಪ್ರೊ.ರವಿವರ್ಮ ಕುಮಾರ್, ಸಾಹಿತಿ ಡಾ.ಬೈರಮಂಗಲ ರಾಮೇಗೌಡ, ಗಾಂಧಿ ಭವನ ಗೌರವ ಕಾರ್ಯದರ್ಶಿ ಇಂದಿರಾ ಕೃಷ್ಣಪ್ಪ, ಜಲತಜ್ಞ ರಾಜೇಂದ್ರ ಮತ್ತಿತರರು ಉಪಸ್ಥಿತರಿದ್ದರು.



ಗಾಂಧೀಜಿ ಕುರಿತು ಸಾಮಾಜಿಕ ಜಾಲತಾಣದಲ್ಲಿ ಅವಹೇಳನಕಾರಿ ಹೇಳಿಕೆ ನೀಡುತ್ತಿರುವುದನ್ನು ಖಂಡಿಸಿ ನಗರದ ಗಾಂಧಿ ಭವನ ಆವರಣದಲ್ಲಿ ಮೌನ ಸತ್ಯಾಗ್ರಹ ನಡೆಸಲಾಯಿತು. ಸ್ವಾತಂತ್ರ್ಯ ಹೋರಾಟಗಾರ ಎಚ್.ಎಸ್.ದೊರೆಸ್ವಾಮಿ ಇದ್ದರು.

ಉದಯವಾಣಿ
ಮಂಗಳವಾರ, ಮೇ 21, 2019

# ಬಿಜೆಪಿಗೆ ಗೋಡ್ಸೆ ಚಿಂತನೆಗಳು ಮಾದರಿ

## ಗಾಂಧೀಜಿ ಹಂತಕನ ವೈಭವೀಕರಣ: ಎಚ್.ಎಸ್.ದೊರೆಸ್ವಾಮಿ ಬೇಸರ

ಬೆಂಗಳೂರು: ಸಮಾಜದಲ್ಲಿ ಶಾಂತಿ, ಸಮಾನತೆ, ಜ್ಯಾತ್ಯತೀತತೆ ಬಯಸದ ಬಿಜೆಪಿ ನಾಯಕರಿಗೆ ಗೋಡ್ಸೆ ಚಿಂತನೆಗಳು ಮಾದರಿಯಾಗಿವೆ ಎಂದು ಸ್ವಾತಂತ್ರ್ಯ ಹೋರಾಟಗಾರ ಎಚ್.ಎಸ್.ದೊರೆಸ್ವಾಮಿ ತಿಳಿಸಿದರು.

ಕರ್ನಾಟಕ ಗಾಂಧಿ ಸ್ಮಾರಕ ನಿಧಿ ವತಿಯಿಂದ ಗಾಂಧಿ ಭವನದ ಆವರಣದಲ್ಲಿ ಸೋಮವಾರ ಆಯೋಜಿಸಿದ್ದ 'ಸಬ್ ಕೋ ಸನ್ಮತಿ ದೇ ಭಗವಾನ್' ಸತ್ಯಾಗ್ರಹದಲ್ಲಿ ಮಾತನಾಡಿದ ಅವರು, ನಾಥೂರಾಮ್ ಗೋಡ್ಸೆ ಗಾಂಧೀಜಿ ಅವರನ್ನು ಮಾತ್ರವಲ್ಲ, ಸತ್ಯವನ್ನೇ ಕಗ್ಗೊಲೆ ಮಾಡಿದ್ದಾನೆ. ಆದರೆ, ಇಂದು ಸಾಕಷ್ಟು ಮಂದಿ ಗೋಡ್ಸೆ ಪರ ವಕಾಲತ್ತು ವಹಿಸುತ್ತಿದ್ದಾರೆ. ಅವನ ತಪ್ಪನ್ನು ಸಮರ್ಥನೆ ಮಾಡುತ್ತಾರೆ. ಅವರಲ್ಲಿ ಆರ್‌ಎಸ್‌ಎಸ್ ಹಾಗೂ ಬಿಜೆಪಿ ನಾಯಕರೂ ಇದ್ದು ಗೋಡ್ಸೆಯನ್ನು ವೈಭವೀಕರಿಸಲು ಮುಂದಾಗಿದ್ದಾರೆ ಎಂದು ಆರೋಪಿಸಿದರು.

ಬಿಜೆಪಿ, ಆರ್‌ಎಸ್‌ಎಸ್‌ನವರು ಸಮಾಜದಲ್ಲಿ ವಿಷ ಹರಡುವುದನ್ನೇ ಕಾಯಕ ಮಾಡಿಕೊಂಡಿದ್ದಾರೆ. ಅದಕ್ಕೆ ಮುಖ್ಯವಾಗಿ ಸಮಾಜದಲ್ಲಿ ಜಾತಿ, ಧರ್ಮ, ಭೇದಭಾವ ಮಾಡುವಂತಹ, ದೇಶದ ಸಂಪತ್ತು ಕೆಲವೇ ವರ್ಗಗಳಿಗೆ ಮಾತ್ರ ಮೀಸಲಿಡುವಲ್ಲಿ ಕಾರ್ಯಪ್ರವೃತ್ತರಾಗಿದ್ದಾರೆ. ಯುವ ಜನತೆಯನ್ನೇ ಗುರಿಯಾಗಿಸಿಕೊಂಡಿರುವ ಬಿಜೆಪಿ ಹಾಗೂ ಆರ್‌ಎಸ್‌ಎಸ್, ಅವರ ಮೂಲಕ ಹಸಿ ಸುಳ್ಳುಗಳನ್ನು ಸಮಾಜದ ಮೇಲೆ ಹೇರುತ್ತಿವೆ. ಹೀಗಾಗಿ ಯುವಜನತೆ ಎಚ್ಚೆತ್ತು, ಆರ್‌ಎಸ್‌ಎಸ್ ಕಾರ್ಯಚಟುವಟಿಕೆಗಳಿಂದ ದೂರ ಉಳಿಯಬೇಕು. ಇನ್ನು ಗೋಡ್ಸೆ ತಾನು ಬರೆದ ಪುಸ್ತಕದಲ್ಲಿ ಗಾಂಧಿ, ಮುಹಮ್ಮದೀಯರ ಪರ ಇದ್ದಿದ್ದರಿಂದ ಅವರನ್ನು ಕೊಲೆ ಮಾಡಿದೆ ಎಂದು ಬರೆದುಕೊಂಡಿದ್ದಾನೆ. ಆದರೆ, ಇದರಲ್ಲಿ ಸತ್ಯ ಇಲ್ಲ, ಸುಳ್ಳು ಮಾಹಿತಿ ಮೂಲಕ ಇತಿಹಾಸವನ್ನು ಬದಲಾಯಿಸುವುದು ಸರಿಯಲ್ಲ ಎಂದರು.



ಕರ್ನಾಟಕ ಗಾಂಧಿ ಸ್ಮಾರಕ ನಿಧಿ ವತಿಯಿಂದ ಗಾಂಧಿ ಭವನದ ಆವರಣದಲ್ಲಿ ಸೋಮವಾರ ಆಯೋಜಿಸಿದ್ದ 'ಸಬ್ ಕೋ ಸನ್ಮತಿ ದೇ ಭಗವಾನ್' ಸತ್ಯಾಗ್ರಹದಲ್ಲಿ ಸ್ವಾತಂತ್ರ್ಯ ಹೋರಾಟಗಾರ ಎಚ್.ಎಸ್.ದೊರೆಸ್ವಾಮಿ, ರಂಗಕರ್ಮಿ ಪ್ರಸನ್ನ ಹೆಗ್ಗೋಡು ಹಾಗೂ ಇತರರಿದ್ದರು.

ರಂಗಕರ್ಮಿ ಪ್ರಸನ್ನ ಹೆಗ್ಗೋಡು ಮಾತನಾಡಿ, ಗಾಂಧಿ ಹಾಗೂ ಗೋಡ್ಸೆ ಇಬ್ಬರೂ ರಾಮನ ಭಕ್ತರೇ. ಆದರೂ ಗೋಡ್ಸೆ ಗಾಂಧಿಯನ್ನು ಕೊಂದ. ರಾಮ ರಾಜ್ಯದ ಕುರಿತು ಇಬ್ಬರ ಕಲ್ಪನೆ ಭಿನ್ನವಾಗಿತ್ತು. ಗಾಂಧಿಯವರದ್ದು ಗ್ರಾಮಾಭಿವೃದ್ಧಿ ರಾಮ ರಾಜ್ಯ ಕಲ್ಪನೆಯಾದರೆ, ಗೋಡ್ಸೆಯದ್ದು ಪುರೋಹಿತಶಾಹಿ ರಾಮ ರಾಜ್ಯ ಕಲ್ಪನೆಯಾಗಿತ್ತು. ಹೀಗಾಗಿ, ನಾವು ಯಾವ ಕಲ್ಪನೆ ಇಂದು ನಮ್ಮ ದೇಶಕ್ಕೆ ಅವಶ್ಯಕ ಎಂದುದನ್ನು ಅರ್ಥಮಾಡಿಕೊಂಡು ಮುಂದೆ ಸಾಗಬೇಕೇ ಹೊರತು, ಗಾಂಧಿ ಮೂರ್ತಿ ಧ್ವಂಸ, ಅವಹೇಳನಕಾರಿ ಮಾತು, ವಿರೋಧಿ ನಡೆಯಿಂದಲ್ಲ ಎಂದು ತಿಳಿಸಿದರು.

ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ಡಾ.ವೂಡೇ ಪಿ. ಕೃಷ್ಣ ಮಾತನಾಡಿ, ಕೆಲವು ಧಾರ್ಮಿಕ ಮೂಲಭೂತವಾದಿಗಳು ಗಾಂಧೀಜಿಯ ಕುರಿತು ಅವಹೇನಕಾರಿಯಾಗಿ ಮಾತನಾಡುವ ಮೂಲಕ ಗಾಂಧಿಯನ್ನು ಸಮಾಜದಿಂದ ಮರೆಮಾಚಲು ವಿಫಲ ಪ್ರಯತ್ನ ನಡೆಸುತ್ತಿದ್ದಾರೆ. ಯುವಜನತೆ ಗಾಂಧೀಜಿ ಬದುಕನ್ನು ಸರಿಯಾಗಿ ಅರ್ಥ ಮಾಡಿಕೊಳ್ಳಬೇಕು. ದೇಶಕ್ಕಾಗಿ ಅವರು ಮಾಡಿದ ಕಾರ್ಯಗಳ ಕುರಿತು ಗಂಭೀರ ಅಧ್ಯಯನ ನಡೆಸಬೇಕು ಎಂದು ಸಲಹೆ ನೀಡಿದರು.

ನಿವೃತ್ತ ಅಡ್ವೋಕೇಟ್ ಜನರಲ್ ಪ್ರೊ. ರವಿವರ್ಮಕುಮಾರ್, ಸಾಹಿತಿ ಡಾ.ಬೈರಮಂಗಲ ರಾಮೇಗೌಡ, ಗಾಂಧಿಭವನದ ಗೌರವ ಕಾರ್ಯದರ್ಶಿ ಇಂದಿರಾ ಕೃಷ್ಣಪ್ಪ ಉಪಸ್ಥಿತರಿದ್ದರು.

ಪ್ರಜಾವಾಣಿ

ಮಂಗಳವಾರ • ಮೇ 21, 2019



ಗ್ರಹ...

ಮಹಾತ್ಮ ಗಾಂಧೀಜಿ ಅವರನ್ನು ಅಸಹನೀಯವಾಗಿ ಬಿಂಬಿಸುತ್ತಿರುವುದನ್ನು ವಿರೋಧಿಸಿ ಗಾಂಧಿ ಭವನದಲ್ಲಿ ಗಾಂಧಿವಾದಿಗಳು ಸೋಮವಾರ ಸತ್ಯಾಗ್ರಹ ನಡೆಸಿದರು. ಸ್ವಾತಂತ್ರ್ಯ ಹೋರಾಟಗಾರ ಎಚ್.ಎಸ್.ದೊರೆಸ್ವಾಮಿ, ರಂಗಕರ್ಮಿ ಪ್ರಸನ್ನ, ಜಲತಜ್ಞ ರಾಜೇಂದ್ರ ಸಿಂಗ್, ಹಿರಿಯ ವಕೀಲ ರವಿವರ್ಮ ಕುಮಾರ್ ಇದ್ದಾರೆ

ಪ್ರಜಾವಾಣಿ ಚಿತ್ರ

ಕನ್ನಡಪ್ರಭ ಮಂಗಳವಾರ 21.5.2019



ನಗರದ ಗಾಂಧಿ ಭವನದಲ್ಲಿ ಗಾಂಧೀಜಿ 150ನೇ ಜನ್ಮ ವರ್ಷಾಚರಣೆ ಅಂಗವಾಗಿ ಆಯೋಜಿಸಿದ್ದ ಸಂವಾದವನ್ನು ರಾಜ್ಯ ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಇಲಾಖೆ ನಿವೃತ್ತ ನಿರ್ದೇಶಕ ಎನ್.ಆರ್.ವಿಶುಕುಮಾರ್ ಉದ್ಘಾಟಿಸಿದರು.

# ಭಾರತದಲ್ಲಿ ಮಾತ್ರ ಗೋಡ್ಸೆ ವೈಭವೀಕರಣ: ವಿಶುಕುಮಾರ್

ಬೆಂಗಳೂರು: ಇಡೀ ವಿಶ್ವವೇ ಗಾಂಧೀಜಿ ಕಡೆಗೆ ನೋಡುತ್ತಿರುವ ಪ್ರಸ್ತುತ ಸಂದರ್ಭದಲ್ಲಿ ಭಾರತದಲ್ಲಿ ಮಾತ್ರ ಗೋಡ್ಸೆಯನ್ನು ವೈಭವೀಕರಿಸಲಾಗುತ್ತಿದೆ ಎಂದು ರಾಜ್ಯ ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಇಲಾಖೆ ನಿವೃತ್ತ ನಿರ್ದೇಶಕ ಎನ್.ಆರ್.ವಿಶು ಕುಮಾರ್ ವಿಷಾದ ವ್ಯಕ್ತಪಡಿಸಿದರು. ಗಾಂಧೀಜಿ 150ನೇ ಜನ್ಮ ವರ್ಷಾಚರಣೆ ಅಂಗವಾಗಿ 'ಕರ್ನಾಟಕ ಗಾಂಧಿ ಸ್ಮಾರಕ ನಿಧಿ' ಸೋಮವಾರ ನಗರದ ಗಾಂಧಿ ಭವನದಲ್ಲಿ ಹಮ್ಮಿಕೊಂಡಿದ್ದ 'ಗಾಂಧಿ ಅಂಗಳದಲ್ಲಿ ಗಾಂಧಿ ಚಿಂತಕರು' ಸಂವಾದ ಕಾರ್ಯಕ್ರಮಕ್ಕೆ ಚಾಲನೆ ನೀಡಿ ಅವರು ಮಾತನಾಡಿದರು. ಇಡೀ ವಿಶ್ವವೇ ಗಾಂಧೀಜಿಯನ್ನು ವಿಶ್ವ ನಾಯಕ ಎಂದು ಒಪ್ಪಿಕೊಂಡಿದೆ. ಅವರ ಜನ್ಮ ದಿನವನ್ನು ವಿಶ್ವ ಅಹಿಂಸಾ ದಿನಾಚರಣೆಯಾಗಿ ಆಚರಿಸಲಾಗುತ್ತಿದೆ. ವಿಶ್ವವೇ ಗಾಂಧೀಜಿ ಕಡೆ ನೋಡುತ್ತಿರುವಾಗ, ಭಾರತದಲ್ಲಿ ಗೋಡ್ಸೆ ಅವರನ್ನು ವೈಭವೀಕರಿಸುತ್ತಿರುವುದು ಸರಿಯಲ್ಲ ಎಂದು ತಿಳಿಸಿದರು. ರಂಗಕರ್ಮಿ ಪ್ರಸನ್ನ ಹೆಗ್ಗೋಡು ಮಾತನಾಡಿ, ಗಾಂಧೀಜಿ ಬಗ್ಗೆ ಅವಹೇಳನಕಾರಿ ಹೇಳಿಕೆಗಳನ್ನು ನೀಡಲಾಗುತ್ತಿದೆ. ಗಾಂಧಿ ಬಗ್ಗೆ ಸಂಪೂರ್ಣವಾಗಿ ತಿಳಿದುಕೊಂಡರೆ ಇಂತಹ ಹೇಳಿಕೆಯನ್ನು ನೀಡುವುದಿಲ್ಲ. ವಿದ್ಯಾರ್ಥಿಗಳು ಹಾಗೂ ಯುವ ಜನತೆಯು ಗಾಂಧೀಜಿ ವಿಚಾರಧಾರಗಳನ್ನು ಯುವ ಜನತೆ ತಿಳಿದುಕೊಳ್ಳಬೇಕು. ಅವರು ಪ್ರತಿಪಾದಿಸಿದ ಅಹಿಂಸೆ ಹಾಗೂ ಸತ್ಯ ಜೀವನದ ಮೌಲ್ಯಗಳು ಎಂದು ಹೇಳಿದರು. ಸಸಿಯೊಂದಕ್ಕೆ ನೀರು ಎರೆಯುವ ಮೂಲಕ ಸಂವಾದ ಕಾರ್ಯಕ್ರಮಕ್ಕೆ ಚಾಲನೆ ನೀಡಲಾಯಿತು. ಕರ್ನಾಟಕ ಗಾಂಧೀ ಸ್ಮಾರಕ ನಿಧಿ ಅಧ್ಯಕ್ಷ ಡಾ.ವೂಡೇ ಪಿ.ಕೃಷ್ಣ ಮತ್ತಿತರರು ಉಪಸ್ಥಿತಿದ್ದರು.

20-05-2019

# ಗಾಂಧಿ ಅವಹೇಳನಕ್ಕೆ ದೊರೆಸ್ವಾಮಿ ಖಂಡನೆ



**ಬೆಂಗಳೂರು, ಮೇ 20**-ಗಾಂಧಿಜಿಯವರು ಸಾಮಾನ್ಯ ಸೇವೆಯಿಂದ ಮಹಾತ್ಮ ಎಂದು ಕರೆಸಿಕೊಂಡವರು. ಅವರ ಕುರಿತು ಸರಿಯಾಗಿ ತಿಳಿದುಕೊಳ್ಳದೆ ಮಾತನಾಡುತ್ತಿರುವುದು ಖಂಡನೀಯ ಎಂದು ಹಿರಿಯ ಸ್ವಾತಂತ್ರ್ಯ ಹೋರಾಟಗಾರ ಹೆಚ್.ಎಸ್. ದೊರೆಸ್ವಾಮಿ ತಿಳಿಸಿದರು.

ನಗರದಲ್ಲಿಂದು ಕುಮಾರಕೃಪಾದ ಗಾಂಧಿ ಭವನ ಆವರಣದಲ್ಲಿ ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಆಯೋಜಿಸಿದ್ದ ಸಬ್ ಕೋ ಸನ್ಮತಿ ದೇ ಭಗವಾನ್ ಎಂಬ ಮೌನ ಸತ್ಯಾಗ್ರಹದ ನೇತೃತ್ವವಹಿಸಿ ಮಾತನಾಡಿದ ಅವರು, ಗಾಂಧಿಯವರ ಕುರಿತು ಅವಹೇಳನಕಾರಿ ಹೇಳಿಕೆಗಳನ್ನು ನೀಡುವ ಮೂಲಕ ಅವರಿಗೆ ಅಪಮಾನ ಮಾಡಲಾಗುತ್ತಿದೆ. ನಾತೂರಾಮ್ ಗೋಡ್ಸೆ ದೇಶ ಭಕ್ತ ನೆಂದು ಹೇಳುತ್ತಿದ್ದಾರೆ ಅವರು ಗಾಂಧಿಯನ್ನ ಹತ್ಯೆ ಮಾಡಿದ್ದಾರೆ ಹೊರತು ಅವರ ವಿಚಾರವನ್ನಲ್ಲ, ಗಾಂಧಿಯವರ ಸತ್ಯ, ಆದರ್ಶಗಳು ಎಂದಿಗೂ ಜೀವಂತ ಎಂದು ಹೇಳಿದರು.

ಗೋಡ್ಸೆ ಪುಸ್ತಕ ಬಂದಿದೆ. ಅದರಲ್ಲಿ ಆತ, ಗಾಂಧಿ ಅವರು ಮಹಮ್ಮದೀಯರ ಪರವಾಗಿ ಇರುವುದರಿಂದ ಕೊಲೆ ಮಾಡಿದೆ ಎನ್ನುತ್ತಾರೆ ಎಂದು ಹೇಳಲಾಗಿದೆ.

ಆದರೆ, ಇದರಲ್ಲಿ ಸತ್ಯ ಇಲ್ಲ ಎಂದ ಅವರು, ಯಾರು ಸಹ ಇತಿಹಾಸವನ್ನು ಬದಲಾಯಿಸುವುದು ಸರಿಯಲ್ಲ ಎಂದರು.

ಹಿಂದುತ್ವವಾದಿ ವಿನಾಯಕ್ ದಾಮೋದರ್ ಸಾವರ್ಕರ್, ಜೈಲಿನಿಂದ ಬಿಡುಗಡೆಯಾಗಲು ಬ್ರಿಟಿಷರ ಮುಂದೆ ಅಂಗಲಾಚಿದ್ದ ಅಷ್ಟೇ ಅಲ್ಲದೆ, ತನ್ನನ್ನು ಬಿಡುಗಡೆಗೊಳಿಸಿದರೆ ಹಾಗೂ ಕ್ಷಮಿಸುವುದಾದರೆ ಕ್ಷಮೆ ಕೋರುವುದಾಗಿ ಬ್ರಿಟಿಷ್ ವಸಾಹತು ಆಡಳಿತಗಾರರಿಗೆ ಸಾವರ್ಕರ್ ಪತ್ರ ಬರೆದಿದ್ದ. ಹೀಗಾಗಿ, ಆತ ಹೇಡಿ. ಆದರೆ, ಭಗತ್ ಸಿಂಗ್ ಅವರನ್ನು ನೇಣಿಗೆ ಹಾಕಿದರೂ ಎಂದೂ ಬ್ರಿಟಿಷರಿಗೆ ತಲೆಬಾಗಿಲ್ಲ ಎಂದು ದೊರೆಸ್ವಾಮಿ ಹೇಳಿದರು.

ಪ್ರಧಾನಿ ನರೇಂದ್ರ ಮೋದಿ ಅವರು ನಮ್ಮ ದೇಶದ ಇತಿಹಾಸದ ಬಗ್ಗೆ ಪೂರ್ಣವಾಗಿ ಓದಿಕೊಂಡಿಲ್ಲ.ಜತೆಗೆ, ಅವರು ಜ್ಞಾನವೂ ಇಲ್ಲ. ಹೀಗಾಗಿ, ಅವರು, ಗಾಂಧಿ ಬಗ್ಗೆ ತಪ್ಪು ಮಾಹಿತಿ ನೀಡುತ್ತಾರೆ ಎಂದರು.

ರಂಗಕರ್ಮಿ ಪ್ರಸನ್ನ ಹೆಗ್ಗೋಡು ಮಾತನಾಡಿ, ಗಾಂಧಿಯವರದ್ದು ಗ್ರಾಮಾಭಿವೃದ್ಧಿ ರಾಮ ರಾಜ್ಯ ಕಲ್ಪನೆಯಾದರೆ, ಗೋಡ್ಸೆಯದ್ದು ಪುರೋಹಿತಶಾಹಿ, ಬ್ರಾಹ್ಮಣೀಯ ರಾಮ ರಾಜ್ಯ ಕಲ್ಪನೆಯಾಗಿತ್ತು. ಹೀಗಾಗಿ, ನಾವು ಯಾವ ಕಲ್ಪನೆ ಇಂದು ನಮ್ಮ ದೇಶಕ್ಕೆ ಅವಶ್ಯಕ ಎಂಬುದನ್ನು ಅರ್ಥಮಾಡಿಕೊಂಡು ಮುಂದೆ ಸಾಗಬೇಕೇ ಹೊರತು ಗಾಂಧಿ ಮೂರ್ತಿ ಧ್ವಂಸ, ಅವಹೇಳನಕಾರಿ ಮಾತು, ವಿರೋಧಿ ನಡೆಯಿಂದಲ್ಲ ಎಂದು ನುಡಿದರು.

ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ಡಾ.ವೂಡೇ ಪಿ. ಕೃಷ್ಣ ಮಾತನಾಡಿ, ಭಾರತ ಎಂದರೆ ಗಾಂಧಿ ಎನ್ನುವ ಕೂಗು ದಟ್ಟವಾಗಿದೆ. ಹೀಗಾಗಿ, ಯುವ ಸಮುದಾಯ ಮೊದಲು ಗಾಂಧಿ ಕುರಿತು, ಓದಿಕೊಳ್ಳಬೇಕು. ಆಗ ಮಾತ್ರ ಅವರ ಬಗ್ಗೆ ಗೌರವ ಬರುತ್ತದೆ ಎಂದು ಹೇಳಿದರು.

ಮಾಜಿ ಅಡ್ವೋಕೇಟ್ ಜನರಲ್ ಪ್ರೊ.ರವಿವರ್ಮಕುಮಾರ್, ಸಾಹಿತಿ ಡಾ.ಬೈರಮಂಗಲರಾಮೇಗೌಡ, ಗಾಂಧಿ ಭವನ ಗೌರವ ಕಾರ್ಯದರ್ಶಿ ಇಂದಿರಾ ಕೃಷ್ಣಪ್ಪ, ಜಲ ತಜ್ಞ ರಾಜೇಂದ್ರ ಸೇರಿದಂತೆ ಪ್ರಮುಖರು ಉಪಸ್ಥಿತರಿದ್ದರು.

ಸಂಜೆವಾಣಿ

ಸೋಮವಾರ, 20 ಮೇ 2019

# ಬಿಜೆಪಿ, ಆರ್ ಎಸ್ ಎಸ್ ಸಮಾಜಕ್ಕೆ ಕಂಟಕ: ದೊರೆಸ್ವಾಮಿ ಟೀಕೆ

ಬೆಂಗಳೂರು,ಮೇ 20–ರಾಷ್ಟ್ರಪಿತ ಮಹಾತ್ಮಗಾಂಧಿನೆಪವನ್ನಿಟ್ಟುಕೊಂಡು ಬಿಜೆಪಿ ಮತ್ತು ಆರ್ ಎಸ್‌ಎಸ್ ಸಮಾಜದಲ್ಲಿ ವಿಷ ಹರಡುತ್ತಿದೆ ಎಂದು ಹಿರಿಯ ಸ್ವಾತಂತ್ರ್ಯ ಹೋರಾಟಗಾರ ಹೆಚ್.ಎಸ್. ದೊರೆಸ್ವಾಮಿ ಟೀಕಿಸಿದರು.

ನಗರದಲ್ಲಿಂದು ಕುಮಾರಕೃಪಾದ ಗಾಂಧಿಭವನದಆವರಣದಲ್ಲಿ ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಆಯೋಜಿಸಿದ್ದ, 'ಸಬ್ ಕೋ ಸನ್ಮತಿ ದೇ ಭಗವಾನ್ ಮೌನ' ಸತ್ಯಾಗ್ರಹದ ನೇತೃತ್ವವಹಿಸಿ ಮಾತನಾಡಿದ ಅವರು, ಗೋಡ್ಸೆ ಗಾಂಧೀ ಮಾತ್ರವಲ್ಲದೆ, ಸತ್ಯವನ್ನು ಕಗ್ಗೊಲೆ ಮಾಡಿದ.ಆದರೆ, ಕೆಲವರು ತಪ್ಪನ್ನು, ಸಮರ್ಥನೆ ಮಾಡುತ್ತಾರೆ. ಇನ್ನೂ, ಸಮಾಜದಲ್ಲಿ ವಿಷ ಹರಡುವುದೇ ಬಿಜೆಪಿ, ಆರೆಸ್ಸೆಸ್ ಕಾಯಕ ಮಾಡಿಕೊಂಡಿದ್ದಾರೆ.

ಗೋಡ್ಸೆ ಪುಸ್ತಕ ಬಂದಿದೆ. ಅದರಲ್ಲಿ ಆತ, ಗಾಂಧಿ ಅವರು ಮುಹಮ್ಮದೀಯರ ಪರವಾಗಿ ಇರುವುದರಿಂದ ಕೊಲೆ ಮಾಡಿದೆ ಎನ್ನುತ್ತಾರೆ. ಆದರೆ, ಇದರಲ್ಲಿ ಸತ್ಯ ಇಲ್ಲ ಎಂದ ಅವರು, ಯಾರು ಸಹ ಇತಿಹಾಸವನ್ನು ಬದಲಾಯಿಸುವುದು ಸರಿಯಲ್ಲ ಎಂದರು.

ಸಾವರ್ಕರ್ ಹೇಡಿ: ಹಿಂದುತ್ವವಾದಿ ವಿನಾಯಕ್ ದಾಮೋದರ್ ಸಾವರ್ಕರ್, ಜೈಲಿನಿಂದ ಬಿಡುಗಡೆಯಾಗಲು ಬ್ರಿಟಿಷ್‌ರ ಮುಂದೆ ಅಂಗಲಾಚಿದ್ದ.ಅಷ್ಟೇ ಅಲ್ಲದೆ, ತನ್ನನ್ನು ಬಿಡುಗಡೆಗೊಳಿಸಿದರೆ ಹಾಗೂ ಕ್ಷಮಿಸುವುದಾದರೆ ಕ್ಷಮೆ ಕೋರುವುದಾಗಿ ಬ್ರಿಟಿಷ್ ವಸಾಹತು ಆಡಳಿತಗಾರರಿಗೆ ಸಾವರ್ಕರ್ ಪತ್ರ ಬರೆದಿದ್ದ.

ಹೀಗಾಗಿ, ಆತ ಹೇಡಿ.ಆದರೆ, ಭಗತ್ ಸಿಂಗ್ ಅವರನ್ನು ನೇಣಿಗೆ ಹಾಕಿದರೂ ಎಂದೂ ಬ್ರಿಟಿಷರಿಗೆ ತಲೆಬಾಗಿಲ್ಲ ಎಂದು ದೊರೆಸ್ವಾಮಿ ಹೇಳಿದರು.

ಮೋದಿಗೆ ಪೂರ್ಣತೆ ಇಲ್ಲ: ಪ್ರಧಾನಿ ನರೇಂದ್ರ ಮೋದಿ ಅವರಿಗೆ ನಮ್ಮ ದೇಶದ ಇತಿಹಾಸದ ಬಗ್ಗೆ ಪೂರ್ಣವಾಗಿ ಓದಿಕೊಂಡಿಲ್ಲ.ಜತೆಗೆ, ಅವರು ಜ್ಞಾನವೂ ಇಲ್ಲ.ಹೀಗಾಗಿ, ಅವರು, ಗಾಂಧಿ ಬಗ್ಗೆ ತಪ್ಪು ಮಾಹಿತಿ ನೀಡುತ್ತಾರೆ ಎಂದರು.

ರಂಗಕರ್ಮಿ ಪ್ರಸನ್ನ ಹೆಗ್ಗೋಡು ಮಾತನಾಡಿ, ಗಾಂಧಿ ಹಾಗೂ ಗೌಡ್ಸೆ ಇಬ್ಬರು ರಾಮನ ಭಕ್ತರೆ, ಆದರೂ ಗೌಡ್ಸೆಯೇ ಗಾಂಧಿಯನ್ನು ಕಗ್ಗೊಲೆ ಮಾಡಿದ. ರಾಮ ರಾಜ್ಯದ ಕುರಿತು ಇಬ್ಬರ ಕಲ್ಪನೆ ಭಿನ್ನವಾಗಿತ್ತು.

ಗಾಂಧಿಯವರದ್ದು ಗ್ರಾಮಾಭಿವೃದ್ಧಿ ರಾಮ ರಾಜ್ಯ ಕಲ್ಪನೆಯಾದರೆ, ಗೌಡ್ಸೆಯದ್ದು, ಪುರೋಹಿತಶಾಹಿ, ಬ್ರಾಹ್ಮಣನೀಯ ರಾಮ ರಾಜ್ಯ ಕಲ್ಪನೆಯಾಗಿತ್ತು. ಹೀಗಾಗಿ, ನಾವು ಯಾವ ಕಲ್ಪನೆ ಇಂದು ನಮ್ಮ ದೇಶಕ್ಕೆ ಅವಶ್ಯಕ ಎಂದುದನ್ನು ಅರ್ಥಮಾಡಿಕೊಂಡು ಮುಂದೆ ಸಾಗಬೇಕೋ ಹೊರತು ಗಾಂಧಿ ಮೂರ್ತಿ ಧ್ವಂಸ, ಅವಹೇಳನಕಾರಿ ಮಾತು, ವಿರೋಧಿ ನಡೆಯಿಂದಲ್ಲ ಎಂದು ನುಡಿದರು.

ಕರ್ನಾಟಕಗಾಂಧಿಸ್ಮಾರಕನಿಧಿಅಧ್ಯಕ್ಷ ಡಾ.ವೂಡೇ ಪಿ. ಕೃಷ್ಣ ಮಾತನಾಡಿ, ಭಾರತ ಎಂದರೆ ಗಾಂಧಿ ಎನ್ನುವ ಕೂಗು ದಟ್ಟವಾಗಿದೆ.ಹೀಗಾಗಿ, ಯುವ ಸಮುದಾಯ ಮೊದಲು ಗಾಂಧಿ ಕುರಿತು, ಓದಿಕೊಳ್ಳಬೇಕು.

ಆಗ ಮಾತ್ರ ಅವರ ಬಗ್ಗೆ ಗೌರವ ಬರುತ್ತದೆ. ಆದರೆ, ಕೆಲವು ಕಿಡಿಗೇಡಿಗಳು, ಸಾಮಾಜಿಕ ಜಾಲತಾಣಗಳಲ್ಲಿ ಗಾಂಧಿ ಕುರಿತು ಅವಹೇಳನ ಮಾಡುತ್ತಿದ್ದಾರೆ.ಇದರ ಜೊತೆಗೆ, ಕೆಲ ರಾಜಕೀಯ ಪಕ್ಷಗಳು, ಜನಪ್ರತಿನಿಧಿಗಳು ಕೈಜೋಡಿಸುತ್ತಿರುವುದು ದುರದೃಷ್ಟಕರ ಎಂದು ಬೇಸರ ವ್ಯಕ್ತಪಡಿಸಿದರು.

ಈ ಸಂದರ್ಭದಲ್ಲಿ ಮಾಜಿ ಅಡ್ವೋಕೇಟ್ ಜನರಲ್ ಪ್ರೊ. ರವಿವರ್ಮಕುಮಾರ್, ಸಾಹಿತಿ ಡಾ.ಬೈರಮಂಗಲರಾಮೇಗೌಡ, ಗಾಂಧಿಭವನ ಗೌರವ ಕಾರ್ಯದರ್ಶಿ ಇಂದಿರಾ ಕೃಷ್ಣಪ್ಪ, ಜಲ ತಜ್ಞ ರಾಜೇಂದ್ರ ತಜ್ಞ ಸೇರಿದಂತೆ ಪ್ರಮುಖರು ಉಪಸ್ಥಿತರಿದ್ದರು.



ಮಹಾತ್ಮ ಗಾಂಧೀಜಿಯವರ ಬಗ್ಗೆ ಅವಹೇಳನಕಾರಿ ಹೇಳಿಕೆ ನೀಡಿರುವುದನ್ನು ಖಂಡಿಸಿ ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಹಾಗೂ ಗಾಂಧಿ ಪರಿವಾರದ ಸಂಘಟನೆಗಳು ಇಂದು ನಗರದಲ್ಲಿ ಸಬ್ ಕೋ ಸನ್ಮತಿ ದೇ ಭಗವಾನ್ ಮೌನ ಸತ್ಯಾಗ್ರಹ ನಡೆಸಿದರು. ಹಿರಿಯ ಸ್ವಾತಂತ್ರ್ಯ ಹೋರಾಟಗಾರ ಹೆಚ್.ಎಸ್.ದೊರೆಸ್ವಾಮಿ, ಪ್ರಸನ್ನ, ಡಾ.ವೂಡೆ ಪಿ.ಕೃಷ್ಣ, ಇಂದಿರಾ ಕೃಷ್ಣಪ್ಪ ಮತ್ತಿತರರು ಭಾಗವಹಿಸಿದ್ದರು.

ಸೋಮವಾರ, 20 ಮೇ, 2019



ಕರ್ನಾಟಕ ಗಾಂಧಿ ಸ್ಮಾರಕ ನಿಧಿ ವತಿಯಿಂದ ಬಾ ಬಾಪು 150ನೆ ವರ್ಷಾಚರಣೆ ಅಂಗವಾಗಿ ಹಮ್ಮಿಕೊಂಡಿದ್ದ ಗಾಂಧಿ ಅಂಗಳದಲ್ಲಿ ಗಾಂಧಿ ಚಿಂತಕರು ಉಪನ್ಯಾಸ ಕಾರ್ಯಕ್ರಮದಲ್ಲಿ ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಇಲಾಖೆಯ ವಿಶ್ರಾಂತ ನಿರ್ದೇಶಕ ವಿಶುಕುಮಾರ್, ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷ ಡಾ.ವೂಡೆ.ಪಿ.ಕೃಷ್ಣ, ರಂಗಕರ್ಮಿ ಪ್ರಸನ್ನ ಹೆಗ್ಗೋಡು, ಗೌರವ ಕಾರ್ಯದರ್ಶಿ ಇಂದಿರಾ ಕೃಷ್ಣಪ್ಪ ಮತ್ತಿತರರು ಹಾಜರಿದ್ದರು.

ಸಂಯುಕ್ತ ಕರ್ನಾಟಕ 30 ಏಪ್ರಿಲ್ 2019 ಮಂಗಳವಾರ

# ಗಾಂಧಿ ತತ್ವಗಳ ಪ್ರಚಾರಕ್ಕಿರಲಿ ಒತ್ತು

ಸಂ.ಕ.ಸಮಾಚಾರ ಬೆಂಗಳೂರು

ಪ್ರಪಂಚದಾದ್ಯಂತ ಗಾಂಧಿ ತತ್ವಗಳನ್ನು ಪ್ರಚಾರ ಮಾಡಬೇಕೆಂದು ಹಿರಿಯ ಸ್ವಾತಂತ್ರ್ಯ ಹೋರಾಟಗಾರ ಎಚ್.ಎಸ್.ದೊರೆಸ್ವಾಮಿ ತಿಳಿಸಿದರು.

ಗಾಂಧಿ ಭವನದಲ್ಲಿ ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಆಯೋಜಿಸಿದ್ದ ಮಹಾತ್ಮ ಗಾಂಧೀಜಿ ಅವರ ಅಂತಾರಾಷ್ಟ್ರೀಯ ಸಮಾವೇಶ ಪೂರ್ವಭಾವಿ ಸಭೆಯಲ್ಲಿ ಮಾತನಾಡಿದ ಅವರು, ಗಾಂಧಿ ತತ್ವಗಳನ್ನು ಒಬ್ಬರಿಂದ ಪ್ರಚಾರ ಮಾಡಲು ಸಾಧ್ಯವಿಲ್ಲ. ಹಾಗಾಗಿ ಗಾಂಧಿ ತತ್ವಗಳನ್ನು ಯಾವೆಲ್ಲಾ ಸಂಸ್ಥೆಗಳು ಜನರಿಗೆ ತಿಳಿಸುತ್ತಿದ್ದವೋ ಅಂತವರಿಗೂ ಅನುದಾನ ನೀಡಿ ಪ್ರೋತ್ಸಾಹಿಸಬೇಕೆಂದರು.

ಕೇಂದ್ರ ಗಾಂಧಿ ಸ್ಮಾರಕ ನಿಧಿಯು ಅಂತಾರಾಷ್ಟ್ರೀಯ ಸಮಾವೇಶ ನಡೆಸಲು ಕರ್ನಾಟಕವನ್ನು ಆಯ್ಕೆ ಮಾಡಿಕೊಂಡಿರುವುದು ಸಂತೋಷ. ಈ ಸಮಾವೇಶದಲ್ಲಿ ಯುವಜನತೆ ಮತ್ತು ಮಹಿಳೆಯರು ಹೆಚ್ಚಾಗಿ ತೊಡಗಿಸಿಕೊಳ್ಳುವಂತೆ ನೋಡಿಕೊಳ್ಳಬೇಕೆಂದ ಅವರು ಸಮಾವೇಶದ ವಿಷಯ ಶಾಂತಿ ಮತ್ತು ಗಾಂಧಿ ಎಂದಿದ್ದರೆ ಒಳಿತು ಎಂದರು.

ಕೇಂದ್ರ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ರಾಮಚಂದ್ರರಾಯ್ ಮಾತನಾಡಿ, ಗಾಂಧೀಜಿ ಅವರ ಜನ್ಮ ದಿನಾಚರಣೆಯನ್ನು ಈ ಬಾರಿ ಜಾಗತಿಕ ಸಮಾವೇಶವಾಗಿ 3 ದಿನಗಳ ಕಾಲ ಕಾರ್ಯಕ್ರಮವನ್ನು ಮಾಡಬೇಕೆಂದು ಚಿಂತನೆ ನಡೆಸಲಾಗಿದೆ ಎಂದರು.



1969ರಲ್ಲಿ ಗಾಂಧೀಜಿ ಅವರ 100 ಜನ್ಮ ದಿನಾಚರಣೆಗೆ ಸರ್ಕಾರದಿಂದ ಹಣ ಬಿಡುಗಡೆ ಮಾಡಿತ್ತು. ಬಾ ಬಾಪು 150ರ ಜನ್ಮ ದಿನಾಚರಣೆಗೆ ಯಾವುದೇ ಅನುದಾನಗಳನ್ನು ನೀಡಿಲ್ಲ. ಈ ಬಾರಿ ಜಾಗತಿಕ ಸಮಾವೇಶಕ್ಕೆ ಸರ್ಕಾರ ಹಣ ಸಹಾಯ ಮಾಡಬೇಕು ಜೊತೆಗೆ ಜನರಿಂದ ಜನರಿಗೆ ಗಾಂಧಿ ತತ್ವಗಳನ್ನು ತಲುಪುವಂತೆ ಮಾಡಬೇಕು ಎಂದು ತಿಳಿಸಿದರು.

ಗಾಂಧಿ ಶಾಂತಿ ಪ್ರತಿಷ್ಠಾನದ ದೆಹಲಿಯ ಅಧ್ಯಕ್ಷ ಕುಮಾರ್ ಪ್ರಶಾಂತ್ ಮಾತನಾಡಿ, ನಾವು ಅಂತಾರಾಷ್ಟ್ರೀಯ ಮಟ್ಟದಲ್ಲಿ ಕಾರ್ಯಕ್ರಮವನ್ನು ಆಯೋಜಿಸಿದರೆ ಶಾಂತಿಧೂತರಾಗಿರುವ ದಲೈಲಾಮ ಅವರನ್ನು ಅತಿಥಿಗಳಾಗಿ ಕರೆಯಬಹುದು ಎಂಬುದು ನನ್ನ ಅನಿಸಿಕೆ ಎಂದು ಹೇಳಿದರು.

ಕೇಂದ್ರ ಗಾಂಧಿ ಮ್ಯೂಸಿಯಂ ಅಧ್ಯಕ್ಷ ಅಣ್ಣಾಮಲೈ ಮಾತನಾಡಿ, ಸಾರ್ಕ್ ದೇಶಗಳನ್ನು ಈ ಸಮಾವೇಶಕ್ಕೆ ಕರೆಯಬೇಕು. ಸಮಾವೇಶದ ವಿಷಯ ಮಹಿಳೆ, ಪರಿಸರ, ಜಾಗತೀಕರಣದ ಎಂದಿದ್ದರೆ ಒಳಿತು. ಈ ಕಾರ್ಯಕ್ರಮವನ್ನು ರೂಪಿಸಲು ಕೆಲವೊಂದು ಗುಂಪುಗಳನ್ನು ಮಾಡಿ ಅದರ ಮೂಲಕ ಕಾರ್ಯನಿರ್ವಹಿಸಿದರೆ ಕಾರ್ಯಕ್ರಮ ಯಶಸ್ವಿಯಾಗುತ್ತದೆ ಎಂದರು.

ಕಾರ್ಯದರ್ಶಿ ಇಂದಿರಾ ಕೃಷ್ಣಪ್ಪ, ಅಂತಾರಾಷ್ಟ್ರೀಯ ಸರ್ವೋದಯ ಟ್ರಸ್ಟ್ ರಾಯಭಾರಿ ನಜರತ್, ಅಧ್ಯಕ್ಷ ವೂಡೇ ಪಿ. ಕೃಷ್ಣ, ಹನುಮಂತಪ್ಪ, ಜೀವನ್‌ಕುಮಾರ್, ಗಿರಿಜಾ ಹೆಗಡೆ, ಕಮಲಾಕ್ಷಿ, ಎಲ್.ನರಸಿಂಹಯ್ಯ ಮತ್ತಿತರರಿದ್ದರು.

ಉದಯವಾಣಿ ಮಂಗಳವಾರ, ಏಪ್ರಿಲ್ 30, 2019

# ಗಾಂಧಿ ಸ್ಮಾರಕ ನಿಧಿಯಿಂದ ಅಂತಾರಾಷ್ಟ್ರೀಯ ಸಮಾವೇಶ

**ಗಾಂಧಿವಾದಿಗಳು, ಸ್ಮಾರಕ ನಿಧಿ ಪದಾಧಿಕಾರಿಗಳ ಒಕ್ಕೊರಲ ನಿರ್ಣಯ**

**ಬೆಂಗಳೂರು:** ರಾಷ್ಟ್ರಪಿತ ಮಹಾತ್ಮ ಗಾಂಧೀಜಿಯ 150ನೇ ಜಯಂತಿ ಅಂಗವಾಗಿ ಕರ್ನಾಟಕ ಗಾಂಧಿ ಸ್ಮಾರಕ ನಿಧಿ ನಗರದಲ್ಲಿ ಅಂತಾರಾಷ್ಟ್ರೀಯ ಸಮಾವೇಶ ಹಮ್ಮಿಕೊಳ್ಳಲು ತೀರ್ಮಾನಿಸಿದೆ.

ನಗರದ ಗಾಂಧಿ ಭವನದಲ್ಲಿ ಸೋಮವಾರ ನಡೆದ ಪೂರ್ವಭಾವಿ ಸಭೆಯಲ್ಲಿ ಭಾಗವಹಿಸಿದ್ದ ಗಾಂಧಿವಾದಿಗಳು, ಸ್ಮಾರಕ ನಿಧಿಯ ಪದಾಧಿಕಾರಿಗಳು ಈ ಸಂಬಂಧ ಒಕ್ಕೊರಲ ನಿರ್ಧಾರ ಕೈಗೊಂಡರು.

ಸಭೆಯ ನಂತರ ಮಾತನಾಡಿದ "ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ಡಾ.ವೂಡೇ ಪಿ. ಕೃಷ್ಣ" ಗಾಂಧೀಜಿ ಕುರಿತ ಈ ಸಮಾವೇಶದಲ್ಲಿ ವಿಶ್ವದಾದ್ಯಂತ ನೆಲೆಸಿರುವ ಗಾಂಧಿವಾದಿಗಳಿಗೆ ಆಹ್ವಾನ ನೀಡಲಾಗುವುದು. ಜತೆಗೆ ಗಾಂಧೀಜಿಯ ತತ್ವ-ಸಿದ್ಧಾಂತಗಳನ್ನು ಅನುರಿಸುತ್ತಿರುವವರನ್ನೂ ಆಮಂತ್ರಿಸಲಾಗುವುದು. ಅವರೆಲ್ಲರೂ ಸಮಾವೇಶದಲ್ಲಿ ಗಾಂಧೀಜಿ ವಿಚಾರಗಳ ಕುರಿತು ಚಿಂತನ-ಮಂಥನ ನಡೆಸಲಿದ್ದಾರೆ. ಈ ಮೊದಲು ಸಾರ್ಕ್ ದೇಶಗಳ ಪ್ರತಿನಿಧಿಗಳನ್ನು ಮಾತ್ರ ಆಹ್ವಾನಿಸಲಾಗುತ್ತಿತ್ತು. ಇದು ಇಂದಿನ ಪೀಳಿಗೆಗೆ ಗಾಂಧೀಜಿಯನ್ನು ಪರಿಚಯಿಸುವ ಪ್ರಯತ್ನಗಳಲ್ಲಿ ಒಂದಾಗಿದೆ. ಈ ಸಂಬಂಧ ಸಭೆಯಲ್ಲಿ ತೀರ್ಮಾನ ಕೈಗೊಳ್ಳಲಾಗಿದೆ ಎಂದರು.

ಭಯೋತ್ಪಾದನೆ ಇಂದು ವಿಶ್ವಕ್ಕೆ ದೊಡ್ಡ ಪಿಡುಗಾಗಿದೆ. ಇಂತಹ ಸಂದರ್ಭದಲ್ಲಿ ಗಾಂಧೀಜೀ ಹೆಚ್ಚು ಪ್ರಸ್ತುತ. ಅಹಿಂಸೆ ಮತ್ತು ಶಾಂತಿ ಮಂತ್ರ ಭಯೋತ್ಪಾದನೆಗೆ ಉತ್ತರ ಆಗಬಲ್ಲದು ಎಂದ ಅವರು, 'ಸಮಾಜದಲ್ಲಿ ಶಾಂತಿ ನೆಲೆಸುವಂತೆ ಮಾಡುವುದು ಈ ಸಮಾವೇಶದ ಉದ್ದೇಶ' ಎಂದು ಹೇಳಿದರು.

ಸಭೆಯಲ್ಲಿ ಸ್ವಾತಂತ್ರ್ಯ ಹೋರಾಟಗಾರ ಡಾ.ಎಚ್.ಎಸ್. ದೊರೆಸ್ವಾಮಿ, ಮಾಜಿ ಸಂಸದ ಎಚ್. ಹನುಮಂತಪ್ಪ, ನವದೆಹಲಿ ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷ ರಾಮಚಂದ್ರ ರಾಹಿ, ಜಯಪ್ರಕಾಶ್ ನಾರಾಯಣ್ ಅವರ ಆಪ್ತಕಾರ್ಯದರ್ಶಿಯಾಗಿದ್ದ ಕುಮಾರ್ ಪ್ರಶಾಂತ್ ಮತ್ತಿತರರು ಭಾಗವಹಿಸಿದ್ದರು.

ಕನ್ನಡಪ್ರಭ ಮಂಗಳವಾರ 30.4.2019



ಮಹಾತ್ಮಾ ಗಾಂಧಿ ಕುರಿತು 'ಅಂತಾರಾಷ್ಟ್ರೀಯ ಸಮಾವೇಶ'ವನ್ನು ಬೆಂಗಳೂರಿನಲ್ಲಿ ಹಮ್ಮಿಕೊಳ್ಳುವ ಹಿನ್ನೆಲೆಯಲ್ಲಿ ನಗರದಲ್ಲಿ ನಡೆದ ಪೂರ್ವಭಾವಿ ಸಭೆಯಲ್ಲಿ ಸ್ವಾತಂತ್ರ್ಯ ಹೋರಾಟಗಾರ ಎಚ್.ಎಸ್.ದೊರೆಸ್ವಾಮಿ ಭಾಗವಹಿಸಿದರು.

# ನಗರದಲ್ಲಿ ಗಾಂಧಿ ಕುರಿತು ಅಂ.ರಾಷ್ಟ್ರೀಯ ಸಮಾವೇಶ

ಬೆಂಗಳೂರು: ರಾಷ್ಟ್ರಪಿತ ಮಹಾತ್ಮಾ ಗಾಂಧೀಜಿ ಅವರ 150ನೇ ವರ್ಷದ ಜಯಂತಿ ಅಂಗವಾಗಿ ಮಹಾತ್ಮಾ ಗಾಂಧಿ ಕುರಿತು 'ಅಂತಾರಾಷ್ಟ್ರೀಯ ಸಮಾವೇಶ'ವನ್ನು ಬೆಂಗಳೂರಿನಲ್ಲಿ ಹಮ್ಮಿಕೊಳ್ಳಲು ಕರ್ನಾಟಕ ಗಾಂಧಿ ಸ್ಮಾರಕ ನಿಧಿ ನಿರ್ಧರಿಸಿದೆ. ಈ ಕುರಿತು ಸೋಮವಾರ ನಗರದ ಗಾಂಧಿ ಭವನದಲ್ಲಿ ನಡೆದ ಪೂರ್ವಭಾವಿ ಸಭೆಯಲ್ಲಿ ಭಾಗವಹಿಸಿದ್ದ ನವದೆಹಲಿಯ ಗಾಂಧಿ ಸ್ಮಾರಕ ನಿಧಿಯ ಪದಾಧಿಕಾರಿಗಳು ಹಾಗೂ ಗಾಂಧಿವಾದಿಗಳ ಈ ನಿರ್ಧಾರ ಕೈಗೊಂಡಿದ್ದಾರೆ. ಗಾಂಧೀಜಿಯವರ ಕುರಿತ ಸಮಾವೇಶಗಳಲ್ಲಿ ಈವರೆಗೂ ಸಾರ್ಕ್ ದೇಶಗಳ ಪ್ರತಿನಿಧಿಗಳನ್ನು ಮಾತ್ರ ಆಹ್ವಾನಿಸಲಾಗುತ್ತಿತ್ತು. ಆದರೆ, ಗಾಂಧೀಜಿ ಅವರ 150ನೇ ಜಯಂತಿಯ ಅಂಗವಾಗಿ ನಡೆಯುವ ಸಮ್ಮೇಳನಕ್ಕೆ ವಿಶ್ವದ ವಿವಿಧ ಭಾಗಗಳಲ್ಲಿರುವ ಗಾಂಧಿವಾದಿಗಳನ್ನು ಆಹ್ವಾನಿಸಲಾಗುತ್ತಿದೆ. ವಿಶ್ವದ ಹಲವು ರಾಷ್ಟ್ರಗಳಲ್ಲಿ ನೂರಾರು ಜನ ಗಾಂಧಿ ತತ್ವ ಸಿದ್ಧಾಂತಗಳನ್ನು ಅನುಸರಿಸುತ್ತಿದ್ದಾರೆ. ಅವರನ್ನು ಸಮಾವೇಶಕ್ಕೆ ಆಹ್ವಾನಿಸಿ ಗಾಂಧಿ ಕುರಿತು ಮಾತನಾಡಲು ಅವಕಾಶ ಕಲಿಸಲು ಸಭೆಯಲ್ಲಿ ನಿರ್ಧರಿಸಲಾಗಿದೆ ಎಂದು ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ಡಾ.ವೂಡೇ ಪಿ.ಕೃಷ್ಣ ತಿಳಿಸಿದರು. ಪ್ರಸ್ತುತ ಭಯೋತ್ಪಾದನೆ ವಿಶ್ವಕ್ಕೆ ದೊಡ್ಡ ಪಿಡುಗಾಗಿ ಕಾಡುತ್ತಿದೆ. ಇಂತಹ ಸಂದರ್ಭದಲ್ಲಿ ಗಾಂಧೀಜಿಯವರ ಅಹಿಂಸೆ ಮತ್ತು ಶಾಂತಿ ಸಿದ್ಧಾಂತದ ಮೂಲಕ ಸಮಾಜದಲ್ಲಿ ಶಾಂತಿ ನೆಲೆಸುವಂತೆ ಮಾಡಲು ಪ್ರಯತ್ನಿಸುವುದು ಸಮಾವೇಶದ ಉದ್ದೇಶ ಎಂದು ವಿವರಿಸಿದರು.. ಸಭೆಯಲ್ಲಿ ಸ್ವಾತಂತ್ರ್ಯ ಹೋರಾಟಗಾರ ಎಚ್.ಎಸ್.ದೊರೆಸ್ವಾಮಿ, ಮಾಜಿ ಸಂಸದ ಎಚ್.ಹನುಮಂತಪ್ಪ, ನವದೆಹಲಿಯ ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷ ರಾಮಚಂದ್ರ ರಾಹಿ, ಜಯಪ್ರಕಾಶ್ ನಾರಾಯಣ್ ಅವರ ಆಪ್ತಕಾರ್ಯದರ್ಶಿಯಾಗಿದ್ದ ಕುಮಾರ್ ಪ್ರಶಾಂತ್ ಇದ್ದರು.

ಸಂಜೆವಾಣಿ ಸೋಮವಾರ 29, ಏಪ್ರಿಲ್ 2019



ಅಂತರರಾಷ್ಟ್ರೀಯ ಸಮಾವೇಶ ಅಂಗವಾಗಿ ನಗರದ ಗಾಂಧಿ ಭವನದಲ್ಲಿ ಏರ್ಪಡಿಸಿದ್ದ ಪೂರ್ವಭಾವಿ ಸಭೆಯಲ್ಲಿ ಸ್ವಾತಂತ್ರ್ಯ ಹೋರಾಟಗಾರ ಹೆಚ್.ಎಸ್. ದೊರೆಸ್ವಾಮಿ, ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ವೊಡೆ ಪಿ. ಕೃಷ್ಣಾ ಮತ್ತಿತರರು ಇದ್ದರು.

ಸುವರ್ಣ
ಟೈಮ್ಸ್ ಆಫ್ ಕರ್ನಾಟಕ

ಸೋಮವಾರ, 29 ಏಪ್ರಿಲ್ 2019

# ನೀರಿಗಾಗಿ ಹೋರಾಡುವ ಕಾಲ ದೂರವಿಲ್ಲ

## ಕನ್ನಡ ಸಾಹಿತ್ಯ ಪರಿಷತ್ತಿನ ಪ್ರಶಸ್ತಿ ಪ್ರದಾನ ಸಮಾರಂಭದಲ್ಲಿ ಭೂ ವಿಜ್ಞಾನಿ ದೇವರಾಜ ರೆಡ್ಡಿ ಎಚ್ಚರಿಕೆ

ಬೆಂಗಳೂರು: ನೀರನ್ನು ಮಿತವಾಗಿ ಬಳಸದಿದ್ದರೆ ನೀರಿಗಾಗಿಯೇ ಹೋರಾಟ ನಡೆಸುವ ಪರಿಸ್ಥಿತಿ ನಿರ್ಮಾಣವಾಗಲಿದೆ; ಹಿಂದೆ ತಾತನ ಕಾಲಕ್ಕೆ ಬಾವಿಗಳು, ಮಗನ ಕಾಲಕ್ಕೆ ಕೊಳವೆ ಬಾವಿಗಳು, ಮೊಮ್ಮಕ್ಕಳ ಕಾಲಕ್ಕೆ ಎಲ್ಲಾ ಖಾಲಿ ಖಾಲಿಯಾಗಿವೆ ಎಂದು ಖ್ಯಾತ ಭೂ ವಿಜ್ಞಾನಿ ದೇವರಾಜ ರೆಡ್ಡಿ ಅವರು ಆತಂಕ ವ್ಯಕ್ತಪಡಿಸಿದರು.

ನಗರದ ಕನ್ನಡ ಸಾಹಿತ್ಯ ಪರಿಷತ್ತಿನ ಶ್ರೀ ಕೃಷ್ಣರಾಜ ಪರಿಷನ್ಮಂದಿರದಲ್ಲಿ ಸಮರ್ಥ ಸಾಹಿತ್ಯ ಮತ್ತು ಸಾಂಸ್ಕೃತಿಕ ಪ್ರತಿಷ್ಠಾನ ವತಿಯಿಂದ ಆಯೋಜಿಸಿದ್ದ ಪ್ರಗತಿಪರ ರೈತರಿಗೆ 'ಭಾಗ್ಯವಂತರು' ಪ್ರಶಸ್ತಿ ಪ್ರದಾನ ಸಮಾರಂಭ ಉದ್ಘಾಟಿಸಿ ಮಾತನಾಡುತ್ತಿದ್ದ ಅವರು, ಕೊಳವೆ ಬಾವಿಗಳ ಹಾವಳಿಯಿಂದ ಭೂಗರ್ಭದಲ್ಲಿ ಜಲಸ್ತರಗಳು ಬರಿದಾಗುತ್ತಿದ್ದು, ಮುಂದಿನ ದಿನಗಳಲ್ಲಿ ಜಲಕ್ಷಾಮ ಎದುರಾಗಲಿದೆ ಎಂದು ಕಳವಳ ವ್ಯಕ್ತಪಡಿಸಿದರು.

ದೇಶದಲ್ಲಿ ನೀರಿಗಾಗಿ ಸುಮಾರು 6 ಕೋಟಿಗೂ ಹೆಚ್ಚು ಕೊಳವೆ ಬಾವಿಗಳನ್ನು ಕೊರೆಸಲಾಗಿದೆ. ಇದರಿಂದ ಶೇ.80ರಷ್ಟು ಜಲಸ್ತರಗಳು ಬರಿದಾಗಿದೆ. ಭಾರತದಲ್ಲಿ ಪ್ರತಿನಿತ್ಯ 250 ಬಿಲಿಯನ್ ಕ್ಯೂಬಿಕ್ ನೀರನ್ನು ಹೊರತೆಗೆಯುವಲ್ಲಿ ಭಾರತ ವಿಶ್ವದಲ್ಲಿಯೇ ಪ್ರಥಮ ಸ್ಥಾನದಲ್ಲಿದೆ ಎಂದು ವಿಷಾದ ವ್ಯಕ್ತಪಡಿಸಿದರು.

ನೀರನ್ನು ಮಿತವಾಗಿ ಬಳಸದಿದ್ದರೆ ನೀರಿಗಾಗಿಯೇ ಹೋರಾಟ ನಡೆಸುವ ಪರಿಸ್ಥಿತಿ ನಿರ್ಮಾಣವಾಗುವುದರಲ್ಲಿ ಯಾವುದೇ ಸಂಶಯವಿಲ್ಲ. ಹಿಂದೆ ಕೇವಲ 50 ರಿಂದ 100 ಅಡಿಗೆ ಭೂಮಿಯಲ್ಲಿ ಲಭ್ಯವಾಗುತ್ತಿದ್ದ ನೀರು ಈಗ 1,000 ಅಡಿ ಕೊರೆಸಿದರೂ ಸಿಗುತ್ತಿಲ್ಲ. ಹಾಗಾಗಿ ಮುಂದಿನ ಪೀಳಿಗೆಯ ಉಳಿವಿಗೆ ಈಗಿನಿಂದಲೇ ಗಿಡ ಮರಗಳನ್ನು ನೆಡುವುದರ ಮೂಲಕ ಪರಿಸರ ಸಂರಕ್ಷಣೆ ಅತಿ ಅವಶ್ಯಕ; ಇದರಿಂದ ಮಳೆ ಹೆಚ್ಚಾಗುವ ಸಾಧ್ಯತೆ ಇದೆ ಎಂದು ಸಲಹೆ ನೀಡಿದರು.

ಕೃಷಿ ಕ್ಷೇತ್ರ ಹೆಚ್ಚಾಗಿ ನೀರನ್ನೇ ಅವಲಂಬಿಸಿದೆ. ವರುಣನ ಅವಕೃಪೆಯಿಂದ ಮಳೆಯಾಗದೇ ಬರ ತಾಂಡವವಾಡುತ್ತಿದೆ. ರೈತರು ನೀರಿಗಾಗಿ ಸಾಲ ಮಾಡಿ ಕೊಳವೆ ಬಾವಿ ತೋಡಿಸಿದರೂ ನೀರು ಬಾರದೇ ಕಂಗಾಲಾಗಿ ಆತ್ಮಹತ್ಯೆಗೆ ಶರಣಾಗುತ್ತಿರುವುದು ದುರ್ದೈವ. ಸರ್ಕಾರ ಪರಿಸರ ಸಂರಕ್ಷಣೆಗೆ ಮುಂದಾಗದಿದ್ದರೆ ಜಲಕ್ಷಾಮ ಕಟ್ಟಿಟ್ಟ ಬುತ್ತಿ ಎಂದು ಎಚ್ಚರಿಸಿದರು.



■ ಕೃಷಿ ಕ್ಷೇತ್ರ ಹೆಚ್ಚಾಗಿ ನೀರನ್ನೇ ಅವಲಂಬಿಸಿದೆ. ವರುಣನ ಅವಕೃಪೆಯಿಂದ ಮಳೆಯಾಗದೆ ಬರ ತಾಂಡವವಾಡುತ್ತಿದೆ. ರೈತರು ನೀರಿಗಾಗಿ ಸಾಲ ಮಾಡಿ ಕೊಳವೆ ಬಾವಿ ತೋಡಿಸಿದರೂ ನೀರು ಬಾರದೇ ಕಂಗಾಲಾಗಿ ಆತ್ಮಹತ್ಯೆಗೆ ಶರಣಾಗುತ್ತಿರುವುದು ದುರ್ದೈವ. ಸರ್ಕಾರ ಪರಿಸರ ಸಂರಕ್ಷಣೆಗೆ ಮುಂದಾಗದಿದ್ದರೆ ಜಲಕ್ಷಾಮ ಕಟ್ಟಿಟ್ಟ ಬುತ್ತಿ....

– ದೇವರಾಜ ರೆಡ್ಡಿ, ಭೂ ವಿಜ್ಞಾನಿ

ಸಮಾರಂಭದಲ್ಲಿ ಪ್ರಗತಿ ಪರ ರೈತರಿಗೆ 'ಭಾಗ್ಯವಂತರು' ಪ್ರಶಸ್ತಿ ನೀಡಿ ಗೌರವಿಸಲಾಯಿತು. ಅಂಕಣಕಾರ ಷಡಕ್ಷರಿ, ಯೋಗ ತಜ್ಞ ಜಗದೀಶ್ ಶೆಟ್ಟಿ, ಉಡುಪಿ ಕೃಷ್ಣ, ವಿಜಯ್ ಸಮರ್ಥ, ಉಪಸ್ಥಿತರಿದ್ದರು.

ಸೋಮವಾರ, 29, ಏಪ್ರಿಲ್, 2019,



ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ಸಮರ್ಥ ಸಾಹಿತ್ಯ ಮತ್ತು ಸಾಂಸ್ಕೃತಿಕ ಪ್ರತಿಷ್ಠಾನ ಆಯೋಜಿಸಿದ್ದ ಕಾರ್ಯಕ್ರಮದಲ್ಲಿ ಪ್ರಗತಿಪರ ರೈತರಿಗೆ 'ಭಾಗ್ಯವಂತರು ಪ್ರಶಸ್ತಿ' ನೀಡಿ ಗೌರವಿಸಲಾಯಿತು. ಮಳೆನೀರು ಕೊಯ್ಲು ತಜ್ಞ ಡಾ.ದೇವರಾಜ ರೆಡ್ಡಿ, ಕರ್ನಾಟಕ ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷ ಡಾ.ವೂಡೆ ಪಿ.ಕೃಷ್ಣ, ರಮಣಶ್ರೀ ಸಮೂಹ ಸಂಸ್ಥೆಯ ಷಡಕ್ಷರಿ ಸೇರಿದಂತೆ ಮತ್ತಿತರರಿದ್ದರು.

ಹೊಸ ದಿಗಂತ ಸೋಮವಾರ, 29 ಏಪ್ರಿಲ್ 2019, ಬೆಂಗಳೂರು

# ರಾಷ್ಟ್ರದಲ್ಲಿ ಜಲಕ್ಷಾಮ: ಭೂ ವಿಜ್ಞಾನಿ



**ಬೆಂಗಳೂರು:** ಮುಂಬರುವ ದಿನಗಳಲ್ಲಿ ರಾಷ್ಟ್ರದಲ್ಲಿ ಜಲಕ್ಷಾಮ ಎದುರಾಗಲಿದೆ ಎಂದು ಭೂ ವಿಜ್ಞಾನಿ ದೇವರಾಜ ರೆಡ್ಡಿ ತಿಳಿಸಿದರು. ಸಾಹಿತ್ಯ ಹಾಗೂ ಸಾಂಸ್ಕೃತಿಕ ಪ್ರತಿಷ್ಠಾನ ಭಾನುವಾರ ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ಏರ್ಪಡಿಸಿದ್ದ ಪ್ರಗತಿಪರ ರೈತರಿಗೆ ಭಾಗ್ಯವಂತರು ಪ್ರಶಸ್ತಿ ಪ್ರದಾನ ಸಮಾರಂಭ ಉದ್ಘಾಟಿಸಿ ಮಾತನಾಡಿದ ಅವರು, ಕೊಳವೆ ಬಾವಿಗಳಿಂದಾಗಿ ಭೂಗರ್ಭದಲ್ಲಿ ನೀರಿನ ಪ್ರಮಾಣ ಕಡಿಮೆಯಾಗುತ್ತಿದೆ. ರಾಷ್ಟ್ರದಲ್ಲಿ ನೀರಿಗಾಗಿ ಆರು ಕೋಟಿಗೂ ಅಧಿಕ ಕೊಳವೆ ಬಾವಿ ಕೊರೆಯಲಾಗಿದೆ. ಇದರಿಂದಾಗಿ ಶೇ. 80 ರಷ್ಟು ಜಲಮೂಲ ಬರಿದಾಗಿದೆ. ನೀರು ತೆಗೆಯುವುದರಲ್ಲಿ ಭಾರತ ಪ್ರಸ್ತುತ ವಿಶ್ವದಲ್ಲಿ ಮೊದಲ ಸ್ಥಾನದಲ್ಲಿದೆ. ಪ್ರತಿನಿತ್ಯ ಭಾರತದಲ್ಲಿ 250 ಬಿಲಿಯನ್ ಕ್ಯೂಬಿಕ್ ನೀರು ತೆಗೆಯಲಾಗುತ್ತಿದೆ ಎಂದರು.

ಮಿತ ಪ್ರಮಾಣದಲ್ಲಿ ನೀರು ಬಳಸದೆ ಹೋದಲ್ಲಿ ಅದಕ್ಕಾಗಿಯೇ ಹೋರಾಡುವ ಪರಿಸ್ಥಿತಿ ನಿರ್ಮಾಣವಾಗುತ್ತದೆ. ಅಂದು ಬಾವಿ, ಇಂದು ಕೊಳವೆ ಬಾವಿ ಹಾಗೂ ಮುಂದೆ ಖಾಲಿ ಬಾವಿ. ಒಮ್ಮೆ 50-100ಅಡಿಯಲ್ಲಿ ಸಿಗುತ್ತಿದ್ದ ನೀರು ಈಗ ಒಂದು ಸಾವಿರ ಅಡಿಯಲ್ಲಿಯೂ ಸಿಗುತ್ತಿಲ್ಲ. ಮುಂದಿನ ಪೀಳಿಗೆಗೆ ನೀರು ಸಿಗುವಂತೆ ಮಾಡಲು ಈಗಿನಿಂದಲೇ ಮರ-ಗಿಡ ನೆಡುವ ಮೂಲಕ ಪರಿಸರ ಸಮತೋಲನ ಕಾಯ್ದುಕೊಳ್ಳಬೇಕಿದೆ. ಆಗ ಮಳೆ ಹೆಚ್ಚಾಗುತ್ತದೆ. ಇಲ್ಲದಿದ್ದರೆ ವರುಣನ ಅವಕೃಪೆಯಿಂದಾಗಿ ಬರ ಪರಿಸ್ಥಿತಿ ಕಾಡುತ್ತದೆ. ಸರ್ಕಾರ ಈಗಲಾದರೂ ಎಚ್ಚೆತ್ತು ಪರಿಸರ ಸಂರಕ್ಷಣೆಗೆ ಮುಂದಾಗಬೇಕು ಎಂದರು.

ವಿಶ್ವವಾಣಿ

29.04.2019




ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ಸಮರ್ಥ ಸಾಹಿತ್ಯ ಮತ್ತು ಸಾಂಸ್ಕೃತಿಕ ಪ್ರತಿಷ್ಠಾನ ಹಾಗೂ ಆರ್ಯವೈಶ್ಯ ಮಹಿಳಾ ಮಂಡಳಿಗಳ ಒಕ್ಕೂಟ ಆಯೋಜಿಸಿದ್ದ ಪ್ರಗತಿಪರ ರೈತರಿಗೆ ಭಾಗ್ಯವಂತರ ಪ್ರಶಸ್ತಿ ಪ್ರದಾನ ಕಾರ್ಯಕ್ರಮಕ್ಕೆ ವಿಶ್ವವಾಣಿ ಅಂಕಣಕಾರ ಎಸ್.ಷಡಕ್ಷರಿ ಚಾಲನೆ ನೀಡಿದರು. ಗಾಂಧಿ ನಿಧಿ ಪ್ರತಿಷ್ಠಾನದ ಅಧ್ಯಕ್ಷ ಡಾ. ವೊಡೆ ಪಿ.ಕೃಷ್ಣ, ಭೂ ವಿಜ್ಞಾನಿ ದೇವರಾಜ್‌ರೆಡ್ಡಿ ಸೇರಿದಂತೆ ಇತರರು ಇದ್ದರು.

ಪ್ರಜಾವಾಣಿ
ಸೋಮವಾರ • ಏಪ್ರಿಲ್ 29, 2019




**ಪದವಿ ಪ್ರದಾನ** ಯಲಹಂಕದಲ್ಲಿನ ಶೇಷಾದ್ರಿಪುರ ಪ್ರಥಮ ದರ್ಜೆ ಕಾಲೇಜಿನಲ್ಲಿ ನಡೆದ 'ಪದವಿ ಪ್ರದಾನ ಕಾರ್ಯಕ್ರಮ'ದಲ್ಲಿ ಉತ್ತಮ ಅಂಕಗಳನ್ನು ಗಳಿಸಿದ ವಿದ್ಯಾರ್ಥಿಗಳಿಗೆ ಚಿನ್ನದ ಪದಕ ಹಾಗೂ ಪ್ರಮಾಣಪತ್ರಗಳನ್ನು ಪ್ರದಾನ ಮಾಡಲಾಯಿತು.

ಸಂಜೆವಾಣಿ

ಭಾನುವಾರ 28, ಏಪ್ರಿಲ್ 2019

# ಸದ್ಯದಲ್ಲೇ ಜಲಕ್ಷಾಮ–ವಿಜ್ಞಾನಿ ಎಚ್ಚರಿಕೆ

(ನಮ್ಮ ಪ್ರತಿನಿಧಿಯಿಂದ)

ಬೆಂಗಳೂರು, ಏ.28– ಕೊಳವೆ ಬಾವಿಗಳಹಾವಳಿಯಿಂದಭೂಗರ್ಭದಲ್ಲಿ ಜಲಸ್ತರಗಳು ಬರಿದಾಗುತ್ತಿದ್ದು, ಮುಂದಿನ ದಿನಗಳಲ್ಲಿ ಜಲ ಕ್ಷಾಮ ಎದುರಾಗಲಿದೆ ಎಂದು ಭೂ ವಿಜ್ಞಾನಿ ದೇವರಾಜ ರೆಡ್ಡಿ ಹೇಳಿದರು.

ಇಂದು ಬೆಳಿಗ್ಗೆ ಕನ್ನಡ ಸಾಹಿತ್ಯ ಪರಿಷತ್ತಿನ ಶ್ರೀ ಕೃಷ್ಣರಾಜ ಪರಿಷನ್ಮಂದಿರದಲ್ಲಿ ಸಮರ್ಥ ಸಾಹಿತ್ಯಮತ್ತುಸಾಂಸ್ಕೃತಿಕಪ್ರತಿಷ್ಠಾನ ವತಿಯಿಂದಆಯೋಜಿಸಿದ್ದಪ್ರಗತಿಪರ ರೈತರಿಗೆ ಭಾಗ್ಯವಂತರು ಪ್ರಶಸ್ತಿ ಪ್ರಧಾನ ಸಮಾರಂಭ ಉದ್ಘಾಟಿಸಿ ಮಾತನಾಡುತ್ತಿದ್ದರು.

ದೇಶದಲ್ಲಿ ನೀರಿಗಾಗಿ ಸುಮಾರು 6 ಕೋಟಿಗೂ ಹೆಚ್ಚು ಕೊಳವೆ ಬಾವಿಗಳನ್ನುಕೊರೆಸಲಾಗಿದೆ. ಇದ-ರಿಂದ ಶೇ. 80ರಷ್ಟು ಜಲಸ್ತರಗಳು ಬರಿದಾಗಿದೆ. ಭಾರತದಲ್ಲಿ ಪ್ರತಿನಿತ್ಯ



ಸಮರ್ಥ ಸಾಹಿತ್ಯ ಮತ್ತು ಸಾಂಸ್ಕೃತಿ ಪ್ರತಿಷ್ಠಾನವು ಕಸಾಪದಲ್ಲಿಂದು ಏರ್ಪಡಿಸಿದ್ದ ಸಮಾರಂಭದಲ್ಲಿ ನಾಡಿನ ಪ್ರಗತಿ ಪರ ರೈತರಿಗೆ ಭಾಗ್ಯವಂತರು ಪ್ರಶಸ್ತಿ ಪ್ರದಾನ ಮಾಡಲಾಯಿತು. ಡಾ. ದೇವರಾಜರೆಡ್ಡಿ, ಡಾ. ವೂಡೆ ಪಿ. ಕೃಷ್ಣ, ಷಡಕ್ಷರಿ, ರಾ. ವಿಜಯಸಮರ್ಥ, ನೇ.ಭ. ರಾಮಲಿಂಗಶೆಟ್ಟಿ ಮತ್ತಿತರರು ಇದ್ದಾರೆ.

250 ಬಿಲಿಯನ್ ಕ್ಯೂಬಿಕ್ ನೀರನ್ನು ಹೊರತೆಗೆಯುವಲ್ಲಿ ಭಾರತ ವಿಶ್ವದಲ್ಲಿಯೇ ಪ್ರಥಮ ಸ್ಥಾನದಲ್ಲಿದೆ ಎಂದು ವಿಷಾದ ವ್ಯಕ್ತಪಡಿಸಿದರು.

ನೀರನ್ನುಮಿತವಾಗಿಬಳಸದಿದ್ದರೇ ನೀರಿಗಾಗಿಯೇ ಹೋರಾಟ ನಡೆಸುವ ಪರಿಸ್ಥಿತಿ ನಿರ್ಮಾಣವಾಗುವುದರಲ್ಲಿ ಯಾವುದೇ ಸಂಶಯವಿಲ್ಲ.

ಹಿಂದೆ ತಾತನ ಕಾಲಕ್ಕೆ ಬಾವಿಗಳು, ಮಗನ ಕಾಲಕ್ಕೆ ಕೊಳವೆ ಬಾವಿಗಳು, ಮೊಮ್ಮಕ್ಕಳ ಕಾಲಕ್ಕೆ ಎಲ್ಲಾ ಖಾಲಿ ಖಾಲಿ ಎಂದು ವ್ಯಂಗ್ಯವಾಡಿದ ಅವರು ಕೇವಲ 50 ರಿಂದ 100 ಅಡಿಗೆ ಭೂಮಿಯಲ್ಲಿ ಲಭ್ಯವಾಗುತ್ತಿದ್ದ ನೀರು ಈಗ 1,000 ಅಡಿ ಕೊರೆಸಿದ್ದರೂ ನೀರು ಸಿಗುತ್ತಿಲ್ಲ.

ಆಗಾಗಿ ಮುಂದಿನ ಪೀಳಿಗೆಯುಳಿವಿಗೆ ಈಗಿನಿಂದಲೇ ಗಿಡ ಮರಗಳನ್ನು ನೆಡುವುದರ ಮೂಲಕ ಪರಿಸರ ಸಂರಕ್ಷಣೆ [illegible] ಇದರಿಂದ ಮಳೆ ಹೆಚ್ಚಾಗುವ ಸಾಧ್ಯತೆ ಇದೆ ಎಂದರು.

ಕೃಷಿ ಕ್ಷೇತ್ರ ಹೆಚ್ಚಾಗಿ ನೀರನ್ನೇ ಅವಲಂಬಿಸಿದೆ. ವರುಣನ ಅವಕೃಪೆಯಿಂದ ಮಳೆಯಾಗದೇ ಬರ ತಾಂಡವವಾಡುತ್ತಿದೆ. ರೈತರು ನೀರಿಗಾಗಿ ಸಾಲ ಮಾಡಿ ಕೊಳವೆ ಬಾವಿ ತೊಡಿಸಿದ್ದರೂ ನೀರು ಬಾರದೇ ಕಂಗಲಾಗಿ ಆತ್ಮಹತ್ಯೆಗೆ ಶರಣಾಗುತ್ತಿರುವುದು ದುರ್ದೈವ. ಸರ್ಕಾರ ಪರಿಸರ ಸಂರಕ್ಷಣೆಗೆ ಮುಂದಾಗದಿದ್ದರೇಜಲಕ್ಷಾಮಕಟ್ಟಿಟ್ಟ ಬುತ್ತಿ ಎಂದು ಎಚ್ಚರಿಸಿದರು.

ಸಮಾರಂಭದಲ್ಲಿ ಪ್ರಗತಿ ಪರ ರೈತರಿಗೆ ಭಾಗ್ಯವಂತರು ಪ್ರಶಸ್ತಿ ನೀಡಿ, ಗೌರವಿಸಲಾಯಿತು.

ಸಮಾರಂಭದಲ್ಲಿ ಅಂಕಣಕಾರ ಷಡಕ್ಷರಿ, ಯೋಗ ತಜ್ಞ ಜಗದೀಶ್ ಶೆಟ್ಟಿ, ಉಡುಪಿ ಕೃಷ್ಣ, ವಿಜಯ್ ಸಮರ್ಥ, ಉಪಸ್ಥಿತರಿದ್ದರು.

ಭಾನುವಾರ
28 -04-2019

# ಜಲ ಸಂರಕ್ಷಣೆಗೆ ಇಂದಿನಿಂದಲೇ ಮುಂದಾಗಿ



ಬೆಂಗಳೂರು,ಏ.28- ಪ್ರಸ್ತುತ ಅಂತರ್ಜಲ ಕುಸಿತದಿಂದ ನೀರಿನ ಸಮಸ್ಯೆ ಹೆಚ್ಚಾಗಲಿದ್ದು, ಇಂದಿನಿಂದಲೇ ಅದರ ಸಂರಕ್ಷಣೆಗೆ ಮುಂದಾಗಬೇಕು. ಇಲ್ಲದಿದ್ದರೆ ಜಲಕ್ಷಾಮ ಎದುರಾಗಲಿದೆ ಎಂದು ಭೂ ವಿಜ್ಞಾನಿ ದೇವರಾಜ್ ರೆಡ್ಡಿ ತಿಳಿಸಿದರು.

ನಗರದ ಕನ್ನಡ ಸಾಹಿತ್ಯ ಪರಿಷತ್‌ನ ಕೃಷ್ಣರಾಜ ಪರಿಷನ್ಮಂದಿರದಲ್ಲಿ ಸಮರ್ಥ ಸಾಹಿತ್ಯ ಮತ್ತು ಸಾಂಸ್ಕೃತಿಕ ಪ್ರತಿಷ್ಠಾನ ಹಾಗೂ ಬೆಂಗಳೂರು ಆರ್ಯವೈಶ್ಯ ಮಹಿಳಾ ಮಂಡಳಿಗಳ ಒಕ್ಕೂಟದವತಿಯಿಂದ ಇಂದು ನಡೆದ ಪ್ರಗತಿಪರ ರೈತರಿಗೆ ಭಾಗ್ಯವಂತರ ಪ್ರಶಸ್ತಿ ಪ್ರದಾನ ಸಮಾರಂಭದಲ್ಲಿ ಅವರು ಮಾತನಾಡಿದರು.

ದೇಶದಲ್ಲಿ ಆರು ಕೋಟಿಗೂ ಹೆಚ್ಚು ಕೊಳವೆ ಬಾವಿಗಳನ್ನು ಕೊರೆಸಿದ್ದಾರೆ. ಹಾಗಾಗಿ ಶೇ.80ರಷ್ಟು ಜಲಸಾರಗಳು ಬರಿದಾಗಿವೆ.

ನೀರು ತೆಗೆಯುವಲ್ಲಿ ವಿಶ್ವದಲ್ಲೇ ಭಾರತ ಮೊದಲ ಸ್ಥಾನದಲ್ಲಿದೆ. ನೀರನ್ನು ಮಿತವಾಗಿ ಬಳಸಬೇಕು ಎಂದು ಸಲಹೆ ನೀಡಿದರು.

ರೈತರು ಸಾಲ ಮಾಡಿ ಕೃಷಿ ಮಾಡುತ್ತಾರೆ. ನೀರಿನ ಸಮಸ್ಯೆಯಿಂದಾಗಿ ಬೆಳೆ ನಷ್ಟವಾಗಿ ಸಾಲಭಾದೆ ಯಿಂದ ನರಳುವಂತಾಗಿದೆ. ಅಲ್ಲದೆ ಹೆಚ್ಚು ಆತ್ಮಹತ್ಯೆ ಮಾಡಿಕೊಳ್ಳುತ್ತಿದ್ದಾರೆ. ಆದ್ದರಿಂದ ನಾವು ನೀರು, ಗಿಡಮರ ಸಂರಕ್ಷಣೆಗೆ ಮುಂದಾಗಬೇಕು ಎಂದರು.

ನಂತರ ಯೋಗಗುರು ಜಗದೀಶ್ ಶೆಟ್ಟಿ ಮಾತನಾಡಿ, ಯೋಗದಿಂದ ರೋಗಗಳು ನಿವಾರಣೆಯಾಗುತ್ತವೆ. ಪ್ರತಿಯೊಬ್ಬರು ಯೋಗಾಭ್ಯಾಸ ಮಾಡಬೇಕು.

ಪ್ರತಿನಿತ್ಯದ ಆಹಾರ ವನ್ನು ಹಿತಮಿತವಾಗಿ ಬಳಸಿ ನೀರನ್ನು ಹೆಚ್ಚಾಗಿ ಕುಡಿಯುವುದರಿಂದ ಆರೋಗ್ಯ ಹದಗೆಡುವುದಿಲ್ಲ ಎಂದು ಹೇಳಿದರು. ಯೋಗ ಮಾಡುವುದರಿಂದ ಮಾನಸಿಕ ಒತ್ತಡದಿಂದ ದೂರವಾಗ ಬಹುದು. ಆರೋಗ್ಯವೂ ಸುಸ್ಥಿತಿಯಲ್ಲಿರುತ್ತದೆ. ಹಾಗಾಗಿ ಎಲ್ಲರೂ ಯೋಗವನ್ನು ನಿತ್ಯ ಜೀವನ ದಲ್ಲಿ ಅಳವಡಿಸಿಕೊಳ್ಳಬೇಕು ಎಂದು ಕರೆ ನೀಡಿದರು.

ಪ್ರಗತಿಪರ ರೈತರಿಗೆ ಭಾಗ್ಯವಂತ ಪ್ರಶಸ್ತಿ ನೀಡಿ ಗೌರವಿಸಲಾಯಿತು. ಟ್ರಸ್ಟ್‌ನ ಅಧ್ಯಕ್ಷ ವಿಜಯ್ ಸಮರ್ಥ, ಗಾಂಧಿ ಶಾಂತಿ ಪ್ರತಿಷ್ಠಾನದ ಅಧ್ಯಕ್ಷ ಡಾ.ವೂಡೆ ಪಿ.ಕೃಷ್ಣ, ಅಂಕಣಕಾರ ಷಡಕ್ಷರಿ, ಪತ್ರಕರ್ತ ಚನ್ನೇಗೌಡ ಸೇರಿದಂತೆ ಮತ್ತಿತರರು ಇದ್ದರು.

ಶನಿವಾರ, 27-4-2019

# ವಿದ್ಯಾಭ್ಯಾಸ ಪೂರ್ಣಗೊಳಿಸಿ ಸಮಾಜಕ್ಕೆ ಮಾದರಿಯಾಗಿ




ಬೆಂಗಳೂರು, ಏ.27-ಶೇಷಾದ್ರಿಪುರಂ ಸಮೂಹ ಶಿಕ್ಷಣ ಸಂಸ್ಥೆಯ ಶಾಖೆಗಳಾದ ಮೇನ್ ಕಾಲೇಜು, ಕಾಂಪೋಸಿಟ್ ಪದವಿ ಕಾಲೇಜು, ಮಾಗಡಿರಸ್ತೆ, ಯಲಹಂಕ, ಕೆಂಗೇರಿ, ಮೈಸೂರು ಕಾಲೇಜುಗಳ 2016-17ರ ಪದವಿ ಪದಗ್ರಹಣ ಸಮಾರಂಭ ಶೇಷಾದ್ರಿಪುರಂ ಯಲಹಂಕ ಲೇಜಿನಲ್ಲಿ ನಡೆಯಿತು.

ಮೇನ್ ಕಾಲೇಜಿನ 531, ಮೈಸೂರು-76, ಮಾಗಡಿರಸ್ತೆ-30, ಕಾಂಪೋಸಿಟ್ ಪದವಿ ಕಾಲೇಜು-280, ಕಾನೂನು ಕಾಲೇಜು-80, ಕೆಂಗೇರಿ ಕಾಲೇಜು-160, ಸಂಜೆ ಪದವಿ ಕಾಲೇಜು-200, ಯಲಹಂಕ ಕಾಲೇಜು-500 ವಿದ್ಯಾರ್ಥಿಗಳಿಗೆ ಹಾಗೂ ರ್‍ಯಾಂಕ್ ಪಡೆದವರಿಗೆ ಮತ್ತು ಟಾಪರ್‌ಗಳಿಗೆ ಸರ್ಟಿಫಿಕೇಟ್‌ಗಳನ್ನು ನೀಡಿ ಪ್ರೋತ್ಸಾಹಿಸಲಾಯಿತು.

ಕಾರ್ಯಕ್ರಮದಲ್ಲಿ ನ್ಯಾಕ್ ನಿರ್ದೇಶಕ ಡಾ.ಎಸ್.ಸಿ.ಶರ್ಮ ಮಾತನಾಡಿ, ಮನಸ್ಸನ್ನು ನಿಗ್ರಹಿಸಿಕೊಂಡರೆ ಜೀವನದಲ್ಲಿ ಯಶಸ್ಸು ಕಾಣುವಿರಿ. ಶೈಕ್ಷಣಿಕ ವಿದ್ಯಾಭ್ಯಾಸವನ್ನು ಪೂರ್ಣಗೊಳಿಸಿ ಸಮಾಜಕ್ಕೆ ಮಾದರಿಯಾಗಬೇಕು. ಜೀವನದ ಹಲವಾರು ಕ್ಷೇತ್ರಗಳಲ್ಲಿ ನೀವು ಕ್ರಿಯಾಶೀಲರಾಗಿ ಸಾಧನೆ ಮಾಡುವ ಮೂಲಕ ಗುರುತಿಸಿಕೊಳ್ಳಬೇಕು ಎಂದು ವಿದ್ಯಾರ್ಥಿಗಳಿಗೆ ಸಲಹೆ ಇತ್ತರು.

"ಸಂಸ್ಥೆಯ ಗೌರವ ಪ್ರಧಾನ ಕಾರ್ಯದರ್ಶಿ ಡಾ.ವೂಡೇ.ಪಿ.ಕೃಷ್ಣ" ಅವರು ಪದವೀಧರರಿಗೆ ಪ್ರಮಾಣವಚನ ಬೋಧಿಸಿದರು. ಸಂಸ್ಥೆಯ ಅಧ್ಯಕ್ಷರು ಎನ್ ಆರ್. ಪಂಡಿತಾರಾಧ್ಯ, ಎಂ.ಎಸ್.ನಟರಾಜ್, ಕೆ.ಕೃಷ್ಣಮೂರ್ತಿ, ಎಸ್ .ಶೇಷನಾರಾಯಣ ಹೆಂಜಾರಪ್ಪ, ಡಬ್ಲ್ಯೂ ಡಿ ಅಶೋಕ್, ಎಲ್ಲಾ ಕಾಲೇಜಿನ ಪ್ರಾಂಶುಪಾಲರು, ಬೋಧಕರು ಮತ್ತು ಬೋಧಕೇತರರು ಹಾಗೂ ವಿದ್ಯಾರ್ಥಿಗಳು, ಪೋಷಕರು ಹಾಜರಿದ್ದರು.

ವಾರ್ತಾ ಭಾರತಿ
ಬೆಂಗಳೂರು । ಶನಿವಾರ, ಏಪ್ರಿಲ್ 27, 2019

■ 'ಬಾ ಮತ್ತು ಬಾಪು 150' ವಿಚಾರ ಸಂಕಿರಣ, ಕಾರ್ಯಾಗಾರ

# ಸೌಹಾರ್ದ ಸಮ ಸಮಾಜ ಬೇಕು

ಪ್ರೊ. ರಹಮತ್ ತರೀಕೆರೆ

ಬೆಂಗಳೂರು, ಎ.26: ಇಂದಿನ ಕಾಲಘಟ್ಟಕ್ಕೆ ಗಾಂಧಿ ಸೇರಿ ಹಲವರು ಕನಸು ಕಂಡಿದ್ದ ಸೌಹಾರ್ದಯುತ ಸಮ ಸಮಾಜವನ್ನು ನಾವು ಕಟ್ಟಬೇಕಾಗಿದೆ ಎಂದು ಹಿರಿಯ ಸಾಹಿತಿ ಪ್ರೊ. ರಹಮತ್ ತರೀಕೆರೆ ಇಂದಿಲ್ಲಿ ಅಭಿಪ್ರಾಯಪಟ್ಟಿದ್ದಾರೆ.

ಶುಕ್ರವಾರ ನಗರದ ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಯುವ ಸಬಲೀಕರಣ ಇಲಾಖೆ ಸೇರಿದಂತೆ ವಿವಿಧ ಸಂಸ್ಥೆಗಳ ಸಹಯೋಗದಲ್ಲಿ 'ಬಾ ಮತ್ತು ಬಾಪು 150' ವರ್ಷಾಚರಣೆ ನಿಮಿತ್ತ ಆಯೋಜಿಸಿದ್ದ ರಾಜ್ಯಮಟ್ಟದ ಒಂದು ದಿನದ ವಿಚಾರ ಸಂಕಿರಣ ಹಾಗೂ ಕಾರ್ಯಾಗಾರ ಉದ್ಘಾಟಿಸಿ ಅವರು ಮಾತನಾಡಿದರು.

ಸಹನೆ ಗಾಂಧೀಜಿ ದೇಶಕ್ಕೆ ನೀಡಿದ್ದ ದೊಡ್ಡ ಅಸ್ತ್ರ. ಅದರಲ್ಲೂ ಧಾರ್ಮಿಕ ಸಹನೆ ಅಗತ್ಯವೆಂದು ಕಲಿಸಿದರು. ಇತರರ ಧರ್ಮ, ಸಂಸ್ಕೃತಿ ಗೌರವಿಸುತ್ತಿದ್ದರು. ಗಾಂಧಿ, ಕುವೆಂಪು, ಕಾರಂತರು, ಗೊರೂರು ರಾಮಸ್ವಾಮಿ ಅಯ್ಯಂಗಾರ್, ವಿ.ಸೀ.ನ ಹೀಗೆ ಪ್ರತಿಯೊಬ್ಬರೂ ಸೌಹಾರ್ದಯುತ ಸಮಸಮಾಜ ಬಯಸಿದ್ದರು.

ಆದರೆ ಇಂದು ಜಾತಿ, ಧರ್ಮ, ಆಹಾರ ಕ್ರಮಕ್ಕಾಗಿ ಬೀದಿ ಬೀದಿಗಳಲ್ಲಿ ಜನರನ್ನು ಕೊಲ್ಲುತ್ತಿದ್ದೇವೆ. ಪ್ರಜಾಪ್ರಭುತ್ವವನ್ನು ರಾಜಕೀಯವಾಗಿ ನೋಡದೆ ಸಾಂಸ್ಕೃತಿಕವಾಗಿ ಧಾರ್ಮಿಕವಾಗಿ ನೋಡಬೇಕು ಎಂದು ನುಡಿದರು.



ಗಾಂಧಿ ಪ್ರಜಾಪ್ರಭುತ್ವವನ್ನು ಅರ್ಥಪೂರ್ಣಗೊಳಿಸಿದರು. ಭಾರತದ ಆತ್ಮ ಇರುವುದೇ ಬಹುತ್ವದಲ್ಲಿ. ದುರ್ಬಲರು, ಅಸಹಾಯಕರ ಧ್ವನಿಗೆ ದನಿಯಾದಾಗ ಮಾತ್ರ ದೇಶ ಕಟ್ಟಲು ಸಾಧ್ಯ. ಆದರಿಂದ ಬಲಿಷ್ಠರು ಬದುಕಲು ಅನುಕೂಲಕರವಾದ ಆರ್ಥಿಕ ನೀತಿ ಅನುಸರಿಸಲಾಗುತ್ತಿದೆ. ಗಾಂಧಿವಾದಿಗಳೆಲ್ಲ ದೇಶಕ್ಕಾಗಿ ತಮ್ಮನ್ನು ಅರ್ಪಿಸಿಕೊಂಡರೆ, ಇಂದು ಮಾರುಕಟ್ಟೆ ಆರ್ಥಿಕ ನೀತಿ ದೇಶವನ್ನೇ ತ್ಯಾಗ ಮಾಡುತ್ತಿದೆ. ಯುದ್ಧ ಭಾಷೆ ಭಿನ್ನಮತದಂತಹ ಸಂದಿಗ್ಧ ಪರಿಸ್ಥಿತಿಯಲ್ಲಿ ಪ್ರಜಾಪ್ರಭುತ್ವವನ್ನು ಜೀವಂತವಾಗಿಡಲು ಗಾಂಧಿ ಸದಾ ಕಾಡುತ್ತಾರೆ ಎಂದು ಹೇಳಿದರು.

> ಮೈಸೂರಿನ ನಾಲ್ವಡಿ ಕೃಷ್ಣರಾಜ ಒಡೆಯರ್ ಅವರ ಆಳ್ವಿಕೆಯನ್ನು ರಾಮರಾಜ್ಯ ಎಂದಿದ್ದ ಗಾಂಧೀಜಿ ಬ್ರಿಟಿಷ್ ಆಡಳಿತವನ್ನು ರಾಜಕೀಯ ದೃಷ್ಟಿಯಿಂದ ಪರಿಗಣಿಸಲಿಲ್ಲ. ಪಶ್ಚಿಮ ನಾಗರಿಕತೆಯ ವಿರೋಧಿಯಾದ ಅವರು ಯುರೋಪಿಯನ್ ಮನಸ್ಥಿತಿಯುಳ್ಳ ನೆಹರೂ ಅವರನ್ನು ಪ್ರಧಾನಿಯಾಗಿ ಆಯ್ಕೆ ಮಾಡಿದರು. ಗಾಂಧೀಜಿ ಸ್ವಾತಂತ್ರ್ಯ ನಂತರದ ಭಾರತದ ಪ್ರಜಾಪ್ರಭುತ್ವಕ್ಕೆ ಒಂದು ಹೊಸ ಬುನಾದಿ ಹಾಕಿಕೊಟ್ಟರು. ಆದರೆ ರಾಜಕೀಯ ವ್ಯವಸ್ಥೆಯನ್ನು ಪಡೆಯಲು ಪ್ರಯತ್ನಿಸಲಿಲ್ಲ. [illegible]
>
> -ಪ್ರೊ. ರಹಮತ್ ತರೀಕೆರೆ, ಹಿರಿಯ ಸಾಹಿತಿ

ಸಂಯುಕ್ತ ಕರ್ನಾಟಕ

ಶನಿವಾರ, 27, ಏಪ್ರಿಲ್, 2019



ಬಾ ಮತ್ತು ಬಾಪು 150ನೇ ವರ್ಷಾಚರಣೆ ಕಾರ್ಯಕ್ರಮದಲ್ಲಿ ವಿಧಾನಪರಿಷತ್ ಮಾಜಿ ಸದಸ್ಯ ಮುಖ್ಯಮಂತ್ರಿ ಚಂದ್ರು, ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ವೂಡೇ ಪಿ. ಕೃಷ್ಣ, ಗೌರವ ಕಾರ್ಯದರ್ಶಿ ಇಂದಿರಾ ಕೃಷ್ಣಪ್ಪ, ಸಂಸ್ಕೃತಿ ಚಿಂತಕ ಮೋಹನ್‌ದೇವ್ ಆಳ್ವ ಮತ್ತಿತರರಿದ್ದರು.

ಶನಿವಾರ, 27 ಏಪ್ರಿಲ್ 2019



## ಉದ್ಘಾಟನೆ...

ನಗರದ ಗಾಂಧಿ ಭವನದಲ್ಲಿ ಇಂದು ನಡೆದ ಡಾ.ಕೆ.ನಾಗಪ್ಪ ಆಳ್ವ ಮತ್ತು ಕಲ್ಯಾಣಿ ನಾಗಪ್ಪ ಆಳ್ವ ದತ್ತಿ ಆಶ್ರಯದಲ್ಲಿ ನಡೆದ ವಿಚಾರ ಸಂಕಿರಣ, ಕಾರ್ಯಾಗಾರವನ್ನು ನಟ ಮುಖ್ಯಮಂತ್ರಿ ಚಂದ್ರು ಉದ್ಘಾಟಿಸಿದರು. ರಾಜ್ಯ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ಡಾ.ವೂಡೇ ಪಿ.ಕೃಷ್ಣ, ಗೌ.ಕಾರ್ಯದರ್ಶಿ ಇಂದಿರಾ ಕೃಷ್ಣಪ್ಪ, ಹಿರಿಯ ಸಂಸ್ಕೃತಿ ಚಿಂತಕ ಕೆ.ಮೋಹನ್ ದೇವ ಆಳ್ವ ಮತ್ತಿತರರು ಇದ್ದಾರೆ.

ಸುವರ್ಣ ಟೈಮ್ಸ್ ಆಫ್ ಕರ್ನಾಟಕ

ಸಂಜೆವಾಣಿ

ಶುಕ್ರವಾರ 26, ಏಪ್ರಿಲ್ 2019



ನಗರದ ಗಾಂಧಿ ಭವನದಲ್ಲಿ ಇಂದು ನಡೆದ ಡಾ.ಕೆ.ನಾಗಪ್ಪ ಆಳ್ವ ಮತ್ತು ಕಲ್ಯಾಣಿ ನಾಗಪ್ಪ ಆಳ್ವ ದತ್ತಿ ಆಶ್ರಯದಲ್ಲಿ ನಡೆದ ವಿಚಾರ ಸಂಕಿರಣ, ಕಾರ್ಯಾಗಾರವನ್ನು ನಟ ಮುಖ್ಯಮಂತ್ರಿ ಚಂದ್ರು ಉದ್ಘಾಟಿಸಿದರು. ರಾಜ್ಯ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ಡಾ.ವೂಡೇ ಪಿ.ಕೃಷ್ಣ, ಗೌ.ಕಾರ್ಯದರ್ಶಿ ಇಂದಿರಾ ಕೃಷ್ಣಪ್ಪ, ಹಿರಿಯ ಸಂಸ್ಕೃತಿ ಚಿಂತಕ ಕೆ.ಮೋಹನ್ ದೇವ ಆಳ್ವ, ಮತ್ತಿತರರು ಇದ್ದಾರೆ.

ವಾರ್ತಾಭಾರತಿ

ಸೋಮವಾರ, ಏಪ್ರಿಲ್ 29, 2019

# ಮುಂದಿನ ದಿನಗಳಲ್ಲಿ ಜಲ ಕ್ಷಾಮ: ಭೂ ವಿಜ್ಞಾನಿ ದೇವರಾಜ ರೆಡ್ಡಿ

ಬೆಂಗಳೂರು, ಎ.28: ಕೊಳವೆ ಬಾವಿಗಳ ಹಾವಳಿಯಿಂದ ಭೂಗರ್ಭದಲ್ಲಿ ಜಲಸ್ತರಗಳು ಬರಿದಾಗುತ್ತಿದ್ದು, ಮುಂದಿನ ದಿನಗಳಲ್ಲಿ ಜಲ ಕ್ಷಾಮ ಎದುರಾಗಲಿದೆ ಎಂದು ಭೂ ವಿಜ್ಞಾನಿ ದೇವರಾಜ ರೆಡ್ಡಿ ಆತಂಕ ವ್ಯಕ್ತಪಡಿಸಿದ್ದಾರೆ.




ರವಿವಾರ ಚಾಮರಾಜಪೇಟೆಯ ಕನ್ನಡ ಸಾಹಿತ್ಯ ಪರಿಷತ್‌ನಲ್ಲಿ ಸಮರ್ಥ ಸಾಹಿತ್ಯ ಮತ್ತು ಸಾಂಸ್ಕೃತಿಕ ಪ್ರತಿಷ್ಠಾನ ವತಿಯಿಂದ ಆಯೋಜಿಸಿದ್ದ ಪ್ರಗತಿಪರ ರೈತರಿಗೆ 'ಭಾಗ್ಯವಂತರು ಪ್ರಶಸ್ತಿ' ಪ್ರದಾನ ಸಮಾರಂಭ ಉದ್ಘಾಟಿಸಿ ಮಾತನಾಡಿದ ಅವರು, ದೇಶದಲ್ಲಿ ನೀರಿಗಾಗಿ ಸುಮಾರು 6 ಕೋಟಿಗೂ ಹೆಚ್ಚು ಕೊಳವೆ ಬಾವಿಗಳನ್ನು ಕೊರೆಸಲಾಗಿದೆ. ಇದರಿಂದ ಶೇ.80ರಷ್ಟು ಜಲಸ್ತರಗಳು ಬರಿದಾಗಿವೆ. ದೇಶದಲ್ಲಿ ಪ್ರತಿನಿತ್ಯ 250 ಬಿಲಿಯನ್ ಕ್ಯೂಬಿಕ್ ನೀರನ್ನು ಹೊರತೆಗೆಯುವಲ್ಲಿ ಭಾರತ ವಿಶ್ವದಲ್ಲಿಯೇ ಪ್ರಥಮ ಸ್ಥಾನದಲ್ಲಿದೆ ಎಂದು ವಿಷಾದ ವ್ಯಕ್ತಪಡಿಸಿದರು.

ಹಾಗಾಗಿ ಮುಂದಿನ ಪೀಳಿಗೆ ಉಳಿವಿಗೆ ಈಗಿನಿಂದಲೇ ಗಿಡ ಮರಗಳನ್ನು ನೆಡುವುದರ ಮೂಲಕ ಪರಿಸರ ಸಂರಕ್ಷಣೆ ಅತಿ ಅವಶ್ಯಕ. ಇದರಿಂದ ಮಳೆ ಹೆಚ್ಚಾಗುವ ಸಾಧ್ಯತೆ ಇದೆ. ಕೃಷಿ ಕ್ಷೇತ್ರ ಹೆಚ್ಚಾಗಿ ನೀರನ್ನೇ ಅವಲಂಬಿಸಿದೆ. ವರುಣನ ಅವಕೃಪೆಯಿಂದ ಮಳೆಯಾಗದೇ ಬರ ತಾಂಡವವಾಡುತ್ತಿದೆ. ರೈತರು ನೀರಿಗಾಗಿ ಸಾಲ ಮಾಡಿ ಕೊಳವೆ ಬಾವಿ ತೋಡಿಸಿದ್ದರೂ ನೀರು ಬಾರದೇ ಕಂಗಲಾಗಿ ಆತ್ಮಹತ್ಯೆಗೆ ಶರಣಾಗುತ್ತಿರುವುದು ದುರ್ದೈವ. ಸರಕಾರ ಪರಿಸರ ಸಂರಕ್ಷಣೆಗೆ ಮುಂದಾಗದಿದ್ದರೇ ಜಲ ಕ್ಷಾಮ ಕಟ್ಟಿಟ್ಟ ಬುತ್ತಿ ಎಂದು ಎಚ್ಚರಿಸಿದರು.

ಸಮಾರಂಭದಲ್ಲಿ ಅಂಕಣಕಾರ ಷಡಕ್ಷರಿ, ಯೋಗ ತಜ್ಞ ಜಗದೀಶ್ ಶೆಟ್ಟಿ, ಉಡುಪಿ ಕೃಷ್ಣ, ವಿಜಯ್ ಸಮರ್ಥ ಉಪಸ್ಥಿತರಿದ್ದರು.

> “ನೀರನ್ನು ಮಿತವಾಗಿ ಬಳಸದಿದ್ದರೆ ನೀರಿಗಾಗಿಯೇ ಹೋರಾಟ ನಡೆಸುವ ಪರಿಸ್ಥಿತಿ ನಿರ್ಮಾಣವಾಗುವುದರಲ್ಲಿ ಯಾವುದೇ ಸಂಶಯವಿಲ್ಲ. ಹಿಂದೆ ತಾತನ ಕಾಲಕ್ಕೆ ಬಾವಿಗಳು, ಮಗನ ಕಾಲಕ್ಕೆ ಕೊಳವೆ ಬಾವಿಗಳು, ಮೊಮ್ಮಕ್ಕಳ ಕಾಲಕ್ಕೆ ಎಲ್ಲಾ ಖಾಲಿ ಖಾಲಿಯಾಗಲಿವೆ. ಕೇವಲ 50ರಿಂದ 100 ಅಡಿಗೆ ಭೂಮಿಯಲ್ಲಿ ಲಭ್ಯವಾಗುತ್ತಿದ್ದ ನೀರು ಈಗ 1,000 ಅಡಿ ಕೊರೆಸಿದರೂ ಸಿಗುತ್ತಿಲ್ಲ.
>
> । ದೇವರಾಜ ರೆಡ್ಡಿ, ಭೂ ವಿಜ್ಞಾನಿ

ನಂ. 1 ಕನ್ನಡ ದಿನಪತ್ರಿಕೆ

ಸೋಮವಾರ 29 ಏಪ್ರಿಲ್ 2019 ○ 29 APRIL 2019

# ನೀರನ್ನು ತುಪ್ಪದ ರೀತಿ ಬಳಸುವ ಕಾಲ ನಿರ್ಮಾಣ

## ಅಂತರ್ಜಲ ತಜ್ಞ ಡಾ. ದೇವರಾಜ ರೆಡ್ಡಿ ಕಳವಳ । ಕೃಷಿ ಸಾಧಕರಿಗೆ ಭಾಗ್ಯವಂತರು ಪ್ರಶಸ್ತಿ ಪ್ರದಾನ

ವಿಜಯವಾಣಿ ಸುದ್ದಿಜಾಲ ಬೆಂಗಳೂರು

ನೀರಿಗೋಸ್ಕರ ಸಾವಿರಾರು ಅಡಿ ಕೊಳವೆಬಾವಿ ಕೊರೆಸುತ್ತಿರುವುದರಿಂದ ಭೂಮಿಯ ಒಡಲಾಳದಲ್ಲಿನ ನೀರಿನ ಮೂಲಗಳು ನಾಶವಾಗುತ್ತಿವೆ. ಇದರಿಂದಾಗಿ ನೀರನ್ನು ಕೂಡ ತುಪ್ಪದ ರೂಪದಲ್ಲಿ ಬಳಸುವ ಕಾಲ ಎದುರಾದರೂ ಅಚ್ಚರಿಯಿಲ್ಲ ಎಂದು ಅಂತರ್ಜಲ ಹಾಗೂ ಮಳೆನೀರು ಕೊಯ್ಲು ತಜ್ಞ ಡಾ. ದೇವರಾಜ ರೆಡ್ಡಿ ಕಳವಳ ವ್ಯಕ್ತಪಡಿಸಿದ್ದಾರೆ.

ಸಮರ್ಥ ಸಾಹಿತ್ಯ ಮತ್ತು ಸಾಂಸ್ಕೃತಿಕ ಪ್ರತಿಷ್ಠಾನ ಏರ್ಪಡಿಸಿದ್ದ ಕೃಷಿ ಸಾಧಕರಿಗೆ ಭಾಗ್ಯವಂತರು ಪ್ರಶಸ್ತಿ ಪ್ರದಾನ ಕಾರ್ಯಕ್ರಮದಲ್ಲಿ ಮಾತನಾಡಿದರು.

» ಅತಿ ಹೆಚ್ಚು ನೀರನ್ನು ತೆಗೆದ ರಾಷ್ಟ್ರಗಳ ಪಟ್ಟಿಯಲ್ಲಿ ಭಾರತ ದೇಶ

ಕಳೆದ 50 ವರ್ಷಗಳಿಂದ ಕೊಳವೆ ಬಾವಿ ಕೊರೆಸಲಾಗುತ್ತಿದೆ. ಈವರೆಗೆ 6 ಕೋಟಿ ಬೋರ್‌ವೆಲ್ ನಿರ್ಮಾಣವಾಗಿದ್ದು, ಶೇ.80 ಜಲಸ್ತರ ನಾಶವಾಗಿದೆ. ಭೂಮಿಯ ಆಳದಿಂದ ಅತಿ ಹೆಚ್ಚು ನೀರನ್ನು ತೆಗೆದ ರಾಷ್ಟ್ರಗಳ ಪಟ್ಟಿಯಲ್ಲಿ ನಾವು ಅಗ್ರಸ್ಥಾನದಲ್ಲಿವೆ ಎಂದು ದೇವರಾಜ ರೆಡ್ಡಿ ಬೇಸರ ವ್ಯಕ್ತಪಡಿಸಿದರು.

**ಕೃಷಿಯಲ್ಲಿ ಲಾಭ ಕಷ್ಟ:** ಅಧಿಕ ನೀರನ್ನು ಅವಲಂಬಿಸಿರುವ ಕೃಷಿ ಪದ್ಧತಿಯಲ್ಲಿ ಲಾಭ ಗಳಿಸುವವರಿಗಿಂತ ಕೈ ಸುಟ್ಟುಕೊಳ್ಳುವವರೇ ಅಧಿಕ ಮಂದಿ. ಇದೆಲ್ಲದರ ನಡುವೆ ಸ್ವಂತ ಪರಿಶ್ರಮದಿಂದ ಕೃಷಿಯಲ್ಲಿ ಯಶಸ್ಸು ಸಾಧಿಸಿದ ಸಾಕಷ್ಟು ಮಂದಿ ಇದ್ದಾರೆ. ಸರ್ಕಾರಗಳು ಇಂತಹವರ ಸಲಹೆ ಹಾಗೂ ಮಾರ್ಗದರ್ಶನ ಪಡೆದು, ರೈತಪರ ಯೋಜನೆಗಳನ್ನು ರೂಪಿಸ ಬೇಕೆಂದು ರಮಣಶ್ರೀ ಸಮೂಹ ಸಂಸ್ಥೆ ಅಧ್ಯಕ್ಷ ಷಡಕ್ಷರಿ ತಿಳಿಸಿದರು.

ಗಾಂಧಿ ಶಾಂತಿ ಪ್ರತಿಷ್ಠಾನದ ಅಧ್ಯಕ್ಷ ವೂಡೇ ಪಿ. ಕೃಷ್ಣ, ಯೋಗ ತಜ್ಞ ಜಗದೀಶ ಶೆಟ್ಟಿ ಮತ್ತಿತರರಿದ್ದರು.



ವಿವಿಧ ಜಿಲ್ಲೆಗಳ ಪ್ರಗತಿಪರ ರೈತರಿಗೆ ಭಾಗ್ಯವಂತರು ಪ್ರಶಸ್ತಿ ಪ್ರದಾನ ಮಾಡಲಾಯಿತು. ಡಾ. ದೇವರಾಜ ರೆಡ್ಡಿ, ರಾ. ವಿಜಯಸಮರ್ಥ, ಷಡಕ್ಷರಿ, ವೂಡೇ ಪಿ. ಕೃಷ್ಣ ಮತ್ತಿತರರಿದ್ದರು.

ಸಾಧಕರಿವರು: ಸಂತೋಷ ಶೆಟ್ಟಿ (ಮಂಗಳೂರು), ದುಂಡಪ್ಪ ವೆಂಕಪ್ಪ ಹಳ್ಳಿ (ಬಾಗಲಕೋಟೆ), ಪ್ರಸಾದರಾಮ ಹೆಗಡೆ (ಯಲ್ಲಾಪುರ), ಡಾ. ಕೆ.ಆರ್. ಶ್ರೀನಿವಾಸ (ತಿಪಟೂರು), ಎಂ.ಎನ್. ರವಿಶಂಕರ (ಕೋಲಾರ), ಕೆ. ಹೇಮಾ ಅನಂತ (ಹಾಸನ), ಚಂದ್ರೇಗೌಡ (ಶಿಕಾರಿಪುರ), ನಾಗವೇಣಿ (ಚಿತ್ರದುರ್ಗ), ಆನಂದಪ್ಪ (ದಾವಣಗೆರೆ), ಶ್ರೀಪತಿ ಭಟ್ (ಶಿರಸಿ) ಹಾಗೂ ಮಹೇಶ್ ಪಾಟೀಲ್ (ಕಲಬುರಗಿ) ಅವರಿಗೆ ಭಾಗ್ಯವಂತರು ಪ್ರಶಸ್ತಿ ಪ್ರದಾನ ಮಾಡಲಾಯಿತು.

### ಮನೋಲ್ಲಾಸ ಕೃತಿ ಬಿಡುಗಡೆ

ವಿಜಯವಾಣಿ ದಿನಪತ್ರಿಕೆಯಲ್ಲಿ ಪ್ರಕಟವಾಗುತ್ತಿರುವ ಅಂಕಣ ಬರಹಗಳ ಸಂಗ್ರಹ 'ಮನೋಲ್ಲಾಸ' ಕೃತಿಯನ್ನು ಷಡಕ್ಷರಿ ಬಿಡುಗಡೆ ಮಾಡಿದರು. ಮನೋಲ್ಲಾಸ ಅಂಕಣದಲ್ಲಿ ಚಿಕ್ಕ ಕಥೆಯ ಮೂಲಕ ಜೀವನ ಸಂದೇಶ ಸಾರಲಾಗುತ್ತಿದೆ ಎಂದು ಮೆಚ್ಚುಗೆ ವ್ಯಕ್ತಪಡಿಸಿದರು. ಈ ಕೃತಿಯ 500 ಪ್ರತಿಗಳನ್ನು ಶಾಲಾ-ಕಾಲೇಜಿಗೆ ಉಚಿತವಾಗಿ ನೀಡುವುದಾಗಿ ಸಮರ್ಥ ಸಾಹಿತ್ಯ ಮತ್ತು ಸಾಂಸ್ಕೃತಿಕ ಪ್ರತಿಷ್ಠಾನದ ಅಧ್ಯಕ್ಷ ರಾ. ವಿಜಯಸಮರ್ಥ ಘೋಷಿಸಿದರು.

### ದಿಗ್ವಿಜಯ ವಾಹಿನಿಗೆ ಮೆಚ್ಚುಗೆ

2018ರಲ್ಲಿ ಆರಂಭಿಸಿದ ಭಾಗ್ಯವಂತರು ಪ್ರಶಸ್ತಿಗೆ ದಿಗ್ವಿಜಯ 24X7 ನ್ಯೂಸ್ ಪ್ರೇರಣೆ. ಜನಪರ ಕಾರ್ಯಕ್ರಮಗಳನ್ನು ನೀಡುತ್ತಿರುವ ವಾಹಿನಿ 'ಕೃಷಿ ಖುಷಿ' ಕಾರ್ಯಕ್ರಮದ ಮೂಲಕ ಕೃಷಿ ಸಾಧಕರನ್ನು ಗುರುತಿಸುವ ಕಾರ್ಯವನ್ನು ಮಾಡಿತು. ಇದರಿಂದಾಗಿ ಭಾಗ್ಯವಂತರು ಪ್ರಶಸ್ತಿಯನ್ನು ಆರಂಭಿಸಿದೆ ಎಂದು ರಾ. ವಿಜಯಸಮರ್ಥ ತಿಳಿಸಿದರು.

ಕರ್ನಾಟಕ

ಸೋಮವಾರ,29 ಏಪ್ರಿಲ್ 2019, ಬೆಂಗಳೂರು

ರೈತರಿಗೆ 'ಭಾಗ್ಯವಂತರು' ಪ್ರಶಸ್ತಿ ಪ್ರದಾನ ಸಮಾರಂಭದಲ್ಲಿ ಡಾ.ದೇವರಾಜರೆಡ್ಡಿ ಎಚ್ಚರಿಕೆ

# ಅಂತರ್ಜಲ ದುರ್ಬಳಕೆಯಿಂದ ಜಲಕ್ಷಾಮ

**ವಿಕ ಸುದ್ದಿಲೋಕ** ಬೆಂಗಳೂರು

ನೀರಿನ ಅತಿಯಾದ ಬಳಕೆಯಿಂದಾಗಿ ಅಂತರ್ಜಲದ ಮಟ್ಟದ ಕುಸಿಯುತ್ತಿದ್ದು, ಪರಿಸ್ಥಿತಿ ಹೀಗೇ ಮುಂದುವರಿದರೆ ದೇಶದಲ್ಲಿ ಜಲಕ್ಷಾಮ ಉಂಟಾಗಲಿದೆ ಎಂದು ಅಂತರ್ಜಲ ಮತ್ತು ಮಳೆನೀರು ಕೊಯ್ಲು ತಜ್ಞ ಡಾ.ದೇವರಾಜ ರೆಡ್ಡಿ ಎಚ್ಚರಿಕೆ ನೀಡಿದರು.

ನಗರದ ಕನ್ನಡ ಸಾಹಿತ್ಯ ಪರಿಷತ್‌ನಲ್ಲಿ ಸಮರ್ಥ ಸಾಹಿತ್ಯ ಮತ್ತು ಸಾಂಸ್ಕೃತಿ ಪ್ರತಿಷ್ಠಾನ ಹಾಗೂ ಬೆಂಗಳೂರು ಆರ್ಯವೈಶ್ಯ ಮಹಿಳಾ ಮಂಡಳಿಗಳ ಒಕ್ಕೂಟ ಹಮ್ಮಿಕೊಂಡಿದ್ದ ಸಮಾರಂಭದಲ್ಲಿ ಪ್ರಗತಿಪರ ರೈತರಿಗೆ 'ಭಾಗ್ಯವಂತರು' ಪ್ರಶಸ್ತಿ ಪ್ರದಾನ ಮಾಡಿ ಅವರು ಮಾತನಾಡಿದರು.



ಬೆಂಗಳೂರಿನಲ್ಲಿ ಭಾನುವಾರ ನಡೆದ ಸಮಾರಂಭದಲ್ಲಿ ಭಾಗ್ಯವಂತರು ಪ್ರಶಸ್ತಿ ಪಡೆದ ಪ್ರಗತಿಪರ ಕೃಷಿಕರೊಂದಿಗೆ ಮುಖ್ಯ ಅತಿಥಿಗಳು

ಪ್ರಗತಿಪರ ರೈತರಾದ ಮಂಗಳೂರಿನ ಸಂತೋಷ ಶೆಟ್ಟಿ, ಬಾಗಲಕೋಟ ಜಿಲ್ಲೆಯ ದುಂಡಪ್ಪ ವೆಂಕಪ್ಪಹಳ್ಳಿ, ಉತ್ತರ ಕನ್ನಡ ಜಿಲ್ಲೆಯ ಪ್ರಸಾದರಾಮ ಹೆಗಡೆ, ತುಮಕೂರು ಜಿಲ್ಲೆಯ ಡಾ.ಕೆ.ಆರ್.ಶ್ರೀನಿವಾಸ್, ಕೋಲಾರ ಜಿಲ್ಲೆಯ ಎಂ.ಎನ್.ರವಿಶಂಕರ್, ಹಾಸನ ಜಿಲ್ಲೆಯ ಕೆ. ಹೇಮಾ ಅನಂತ್, ಶಿವಮೊಗ್ಗ ಜಿಲ್ಲೆಯ ಚಂದ್ರೇಗೌಡ, ಚಿತ್ರದುರ್ಗ ಜಿಲ್ಲೆಯ ನಾಗವೇಣಿ, ದಾವಣಗೆರೆ ಜಿಲ್ಲೆಯ ಆನಂದಪ್ಪ, ಕಲಬುರ್ಗಿ ಜಿಲ್ಲೆಯ ಮಹೇಶ್ ಪಾಟೀಲ್ ಹಾಗೂ ಶಿರಸಿ ತಾಲೂಕಿನ ಶ್ರೀಪತಿ ಭಟ್ ಅವರಿಗೆ 'ಭಾಗ್ಯವಂತರು' ಪ್ರಶಸ್ತಿ ನೀಡಿ ಗೌರವಿಸಲಾಯಿತು.

ಗಾಂಧಿ ಶಾಂತಿ ಪ್ರತಿಷ್ಠಾನದ ಅಧ್ಯಕ್ಷ ಡಾ.ವೂಡೆ ಪಿ.ಕೃಷ್ಣ, ರಮಣಶ್ರೀ ಸಮೂಹ ಸಂಸ್ಥೆಯ ಷಡಕ್ಷರಿ, ಯೋಗಗುರು ಜಗದೀಶ್ ಶೆಟ್ಟಿ ಪ್ರತಿಷ್ಠಾನದ ಅಧ್ಯಕ್ಷ ರಾ.ವಿಜಯಸಮರ್ಥ ಇದ್ದರು.

ಸಂಜೆ ಸಮಾಚಾರ್
ಶುಕ್ರವಾರ 26 ಏಪ್ರಿಲ್ 2019



ಬೆಂಗಳೂರಿನ ಗಾಂಧಿಭವನದಲ್ಲಿ ಆಯೋಜಿಸಲಾಗಿದ್ದ ವಿಚಾರ ಸಂಕಿರಣ ಹಾಗೂ ಕಾರ್ಯಾಗಾರ ಉದ್ಘಾಟನಾ ಕಾರ್ಯಕ್ರಮದಲ್ಲಿ ಚಿತ್ರನಟ ಮುಖ್ಯಮಂತ್ರಿ ಚಂದ್ರು,'' ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ಡಾ.ವೂಡೇ,'' ಇಂದಿರಾ ಕೃಷ್ಣಪ್ಪ ಮತ್ತಿತರರಿದ್ದರು.



…ಭವನದಲ್ಲಿಂದು ಗಾಂಧಿ ಅಧ್ಯಯನ ಕೇಂದ್ರದ ಸಂಚಾಲಕರುಗಳಿಗೆ ಹಮ್ಮಿಕೊಂಡಿದ್ದ ರಾಜ್ಯಮಟ್ಟದ ವಿಚಾರ ಸಂಕಿರಣ ಹಾಗೂ ಕಾರ್ಯಾಗಾರವನ್ನು ಹಿರಿಯ ನಟ ಡಾ.ಮುಖ್ಯಮಂತ್ರಿ ಚಂದ್ರು ಉದ್ಘಾಟಿಸಿದರು. ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷ ಡಾ.ವೂಡೇ ಪಿ.ಕೃಷ್ಣ, ಗೌರವ ಕಾರ್ಯದರ್ಶಿ ಇಂದಿರಾ ಕೃಷ್ಣಪ್ಪ, ಸಾಹಿತಿ ಪ್ರೊ.ರಹಮತ್ ತರೀಕೆರೆ, ಡಾ.ಖಾದ್ರಿನರಸಿಂಹಯ್ಯ, ಮಹಾಲಿಂಗ ನಾಯ್ಕರ್, ಕು.ಪ್ರತ್ಯಕ್ಷಾ ಮತ್ತಿತರರು ಉಪಸ್ಥಿತರಿದ್ದರು.

ಈ ಸಂಜೆ

ಗುರುವಾರ, 25 ಏಪ್ರಿಲ್, 2019




ಶೇಷಾದ್ರಿಪುರಂ ಕಾಲೇಜಿನ ಆಂಗ್ಲ ವಿಭಾಗದ ವತಿಯಿಂದ ಹಮ್ಮಿಕೊಂಡಿದ್ದ ರಾಷ್ಟ್ರೀಯ ಕಾರ್ಯಾಗಾರದಲ್ಲಿ ಬೆಂವಿವಿಯ ಆಂಗ್ಲ ವಿಭಾಗದ ಮುಖ್ಯಸ್ಥೆ ಡಾ. ಕೆ.ಎಸ್.ವೈಶಾಲಿ, ಲೇಖಕ ಕೊಯ್ಲಿಸನ್ ಗುಪ್ತಾ , ಶೇಷಾದ್ರಿಪುರಂ ಶಿಕ್ಷಣ ದತ್ತಿಯ ಪ್ರಧಾನ ಕಾರ್ಯದರ್ಶಿ ವೂಡೆ ಪಿ.ಕೃಷ್ಣ , ಪ್ರೊ. ಜಿ.ಅಲಿಯೋಸಿಸ್ ಮತ್ತಿತರರು ಪಾಲ್ಗೊಂಡಿದ್ದರು.

# ಸಂಶೋಧನೆ ನಿಂತ ನೀರಲ್ಲ

ಸಂ.ಕ ಸಮಾಚಾರ ಬೆಂಗಳೂರು

ಸಂಶೋಧನೆಗಳು ನಿಂತ ನೀರಲ್ಲ. ಅದು ಹೊಸ ಹೊಸ ವಿಚಾರಗಳನ್ನು ತಿಳಿಸುತ್ತವೆ. ವಿಶ್ವವಿದ್ಯಾಲಯಗಳು ಅನೇಕರಿಗೆ ಪಿಎಚ್.ಡಿಗಳನ್ನು ನೀಡುತ್ತಾ ಬರುತ್ತಿವೆ ಎಂದು ಉಪಕುಲಸಚಿವ ಪ್ರಕಾಶ ಆರ್.ಪಾಗೋಜಿ ತಿಳಿಸಿದರು.

ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ನಡೆದ ಕಾರ್ಯಕ್ರಮದಲ್ಲಿ ಅಭಿನಂದನೆ ಸ್ವೀಕರಿಸಿ ಬಳಿಕ ಮಾತನಾಡಿ, ನಮ್ಮ ಸುತ್ತಲಿನ ವಾತಾವರಣವೂ ನಮ್ಮ ಬೆಳವಣಿಗೆಗಳಿಗೆ ಪ್ರತೀಕ. ಒಳ್ಳೆ ಜನರ ಸಹವಾಸದಿಂದಲೇ ನನಗೆ ಈ ಗೌರವ ದೊರೆಯಲು ಸಾಧ್ಯ ಎಂದು ಹೇಳಿದರು.

"ಶಿಕ್ಷಣ ತಜ್ಞವೂಡೇ ಪಿ. ಕೃಷ್ಣ" ಮಾತನಾಡಿ, ಇತ್ತೀಚೆಗೆ ಪಿಎಚ್‌ಡಿ ಪದವಿ ಹಗುರವಾಗುತ್ತಿದೆ ಎಂಬ ಮಾತು ಕೇಳಿಬರುತ್ತಿದೆ. ಇದಕ್ಕೆ ಕಾರಣ ಅನೇಕ ಮಂದಿಗೆ ಗೌರವ ಡಾಕ್ಟರೇಟ್ ಪದವಿ ವಿತರಿಸುತ್ತಿರುವುದು. ಇದನ್ನು ತಮ್ಮ ಹೆಸರಿನ ಮುಂದೆ ಬಳಸುತ್ತಾ ಆ ಡಾಕ್ಟರೇಟ್‌ಗೆ ಇರುವ ಗೌರವವನ್ನು ಕುಸಿಯುವಂತೆ ಮಾಡುತ್ತಿದ್ದಾರೆಂದು ಬೇಸರ ವ್ಯಕ್ತಪಡಿಸಿದರು. ಶಿಕ್ಷಕರು ಸಂಶೋಧನೆ ಕೈಗೊಂಡು ವಿಸ್ತೃತ ಜ್ಞಾನಸಂಪನ್ನರಾಗಿ ಬೋಧಿಸಿ. ಅದು ಉತ್ತಮ ಅಭ್ಯಾಸ ಇದನ್ನು ಎಲ್ಲರೂ ರೂಢಿಸಿಕೊಳ್ಳಬೇಕೆಂದರು.

ಹಿರಿಯ ನ್ಯಾಯವಾದಿ ಸುಬ್ರಹ್ಮಣ್ಯ ಜೋಯಿಸ್ ಮಾತನಾಡಿ, ವಿದ್ಯೆಯನ್ನು ಶ್ರದ್ಧೆ, ಆಸಕ್ತಿಯಿಂದ ಕಲಿತಾಗ ಮಾತ್ರ ಅದು ಒಲಿಯುವುದು. ಜ್ಞಾನಾರ್ಜನೆಗೆ ಎಲ್ಲೆಯಿಲ್ಲ ಅದಕ್ಕೆ ಕಲಿಯಬೇಕೆಂಬ ಆಸಕ್ತಿ ಮುಖ್ಯ.

ಈ ಸಮಾಜದಲ್ಲಿ ಹೇಗೆ ಹುಟ್ಟಿದ್ದರೂ ಆತ ಗುಣವಂತನಾಗಿದ್ದರೆ ಆತನಿಗೆ ಈ ಸಮಾಜದಲ್ಲಿ ಗೌರವ ದೊರೆಯುತ್ತದೆ ಎಂದರು. ಕರ್ನಾಟಕ ಸಂಸ್ಕೃತ ವಿಶ್ವವಿದ್ಯಾಲಯ ಕುಲಪತಿ ಪ್ರೊ.ಪದ್ಮಾಶೇಖರ್ ಮಾತನಾಡಿ, ಪ್ರಾಧ್ಯಾಪಕರು ಒಗ್ಗಟ್ಟಿನಿಂದ ಕಾರ್ಯನಿರ್ವಹಿಸದರೆ ಮಾತ್ರ ವಿಶ್ವವಿದ್ಯಾಲಯ ಅಭಿವೃದ್ಧಿಯಾಗಲು ಸಾಧ್ಯ.

ಇದರ ಅಭಿವೃದ್ಧಿಗೆ ಪಾಗೋಜಿ ಅವರು ನಮಗೆ ಎಲ್ಲಾ ರೀತಿಯಲ್ಲಿ ಸಹಕಾರ ನೀಡಿದ್ದಾರೆಂದರು. ಶ್ರೀ ಶಿವಲಿಂಗಾನಂದ ಮಹಾಸ್ವಾಮೀಜಿ, ಮಲ್ಲೇಪುರಂ ಜಿ.ವೆಂಕಟೇಶ್, ಬುದ್ಧ ಬಸವ ಗಾಂಧಿ ಸಾಂಸ್ಕೃತಿಕ ಟ್ರಸ್ಟ್ ಅಧ್ಯಕ್ಷ ಎಸ್.ರಾಮಲಿಂಗೇಶ್ವರ ಮತ್ತಿತರರಿದ್ದರು.



ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ನಡೆದ ಕಾರ್ಯಕ್ರಮದಲ್ಲಿ ಡಾ.ಪ್ರಕಾಶ ಆರ್.ಪಾಗೋಜಿ ಅವರನ್ನು ಅಭಿನಂದಿಸಲಾಯಿತು.

ಪ್ರಜಾವಾಣಿ
ಬುಧವಾರ ಏಪ್ರಿಲ್ 10, 2019

# 'ಗಾಂಧಿ ಚಿಂತನೆ ಜನರಿಗೆ ತಲುಪಲಿ'

ಪ್ರಜಾವಾಣಿ ವಾರ್ತೆ

ಬೆಂಗಳೂರು: 'ಓದು ಕಡಿಮೆಯಾಗುತ್ತಿರುವ ಕಾಲಘಟ್ಟದಲ್ಲಿ ದೃಶ್ಯ ಮಾಧ್ಯಮದ ಮೂಲಕ ಗಾಂಧೀಜಿಯವರ ಚಿಂತನೆಗಳನ್ನು ಜನರಿಗೆ ತಲುಪಿಸಬೇಕಾದ ಅಗತ್ಯವಿದೆ' ಎಂದು ಕರ್ನಾಟಕ ಚಲನ ಚಿತ್ರ ಅಕಾಡೆಮಿಯ ಅಧ್ಯಕ್ಷ ನಾಗತಿಹಳ್ಳಿ ಚಂದ್ರಶೇಖರ ಅಭಿಪ್ರಾಯಪಟ್ಟರು.

ಭಾರತೀಯ ವಿದ್ಯಾಭವನ, ಕರ್ನಾಟಕ ಚಲನಚಿತ್ರ ಅಕಾಡೆಮಿಯ ಸಹಯೋಗದೊಂದಿಗೆ ನಗರದಲ್ಲಿ ಆಯೋಜಿಸಿರುವ ಮೂರು ದಿನಗಳ 'ಮಹಾತ್ಮ ಗಾಂಧಿ-150' ಚಲನಚಿತ್ರೋತ್ಸವವನ್ನು ಉದ್ಘಾಟಿಸಿ ಅವರು ಮಾತನಾಡಿದರು.

'ಗಾಂಧೀಜಿಯವರಿಗೆ ವೈಯಕ್ತಿವಾಗಿ ಚಲನಚಿತ್ರಗಳಲ್ಲಿ ಅಷ್ಟು ಆಸಕ್ತಿ ಇರಲಿಲ್ಲ. ಚಲನಚಿತ್ರ, ಯಂತ್ರ ಸಂಸ್ಕೃತಿಯ ಪ್ರತಿನಿಧಿ ಹಾಗೂ ಅದೊಂದು ವ್ಯವಹಾರ ಎನ್ನುವ ಚಿಕ್ಕ ನಿರ್ಲಕ್ಷ್ಯ ಇತ್ತು. ವಿಪರ್ಯಾಸವೆಂದರೆ ಅವರು ಇಷ್ಟಪಡದ ಮಾಧ್ಯಮದ ಮೂಲಕವೇ ಜಗತ್ತಿನ ಯುವಜನತೆಯನ್ನು ತಲುಪಿದ್ದಾರೆ' ಎಂದರು.

'ಗಾಂಧೀಜಿಯವರ ಕುರಿತಾದ ಸಿನಿಮಾಗಳು ಪ್ರತಿ ಬಾರಿಯೂ ಹೊಸ ಹೊಳಹು ಹಾಗೂ ಅರ್ಥವನ್ನು ಕೊಡುತ್ತವೆ. ಕೆಲವೊಂದು ವಿಷಯದಲ್ಲಿ ಅವರನ್ನು ಒಪ್ಪದಿದ್ದರೂ, ಅವರ ಎದುರು ಮಂಡಿಯೂರಿ ಪ್ರಾರ್ಥಿಸುವಂತೆ ಮಾಡುತ್ತವೆ' ಎಂದು ಹೇಳಿದರು.



ಗಾಂಧೀಜಿ ಅವರ ಭಾವಚಿತ್ರಕ್ಕೆ ಪುಷ್ಪ ನಮನ ಸಲ್ಲಿಸಲಾಯಿತು. (ಎಡದಿಂದ) ಕರ್ನಾಟಕ ಚಲನಚಿತ್ರ ಅಕಾಡೆಮಿ ರಿಜಿಸ್ಟ್ರಾರ್ ಎಚ್.ಬಿ. ದಿನೇಶ್, ಭಾರತೀಯ ವಿದ್ಯಾಭವನದ ನಿರ್ದೇಶಕ ಎಚ್.ಎನ್.ಸುರೇಶ್, ಚಿರಂಜೀವಿ ಸಿಂಗ್, ನಾಗತಿಹಳ್ಳಿ ಚಂದ್ರಶೇಖರ ಮತ್ತು ವೂಡೆ ಪಿ.ಕೃಷ್ಣ ಅವರು ಇದ್ದರು. ಪ್ರಜಾವಾಣಿ ಚಿತ್ರ

"ಕರ್ನಾಟಕ ಗಾಂಧಿ ಸ್ಮಾರಕ ನಿಧಿ" ಅಧ್ಯಕ್ಷ ವೂಡೇ ಪಿ.ಕೃಷ್ಣ 'ಯುದ್ಧ ಬಯಸುವುದನ್ನೇ ರಾಷ್ಟ್ರಪ್ರೇಮ ಎಂದುಕೊಂಡಿರುವ ಪ್ರಸ್ತುತ ದಿನಮಾನಗಳಲ್ಲಿ ಗಾಂಧೀಜಿಯವರ ವಿಚಾರಧಾರೆಗಳು ತುಂಬಾ ಮುಖ್ಯವಾಗುತ್ತವೆ' ಎಂದು ಹೇಳಿದರು.

ನಿವೃತ್ತ ಐಎಎಸ್ ಅಧಿಕಾರಿ ಚಿರಂಜೀವಿ ಸಿಂಗ್ ಮಾತನಾಡಿ, 'ಗಾಂಧಿ ಒಬ್ಬ ಶ್ರೇಷ್ಠ ಬರಹಗಾರರಾಗಿದ್ದರು. ಅವರ ಬರಹಗಳನ್ನು 100 ಸಂಪುಟದಲ್ಲಿ ಸಂಪಾದಿಸಲಾಗಿದೆ' ಎಂದು ತಿಳಿಸಿದರು.

ರಿಚರ್ಡ್ ಅಟೆನ್‌ಬರೊ ನಿರ್ದೇಶನದ 'ಗಾಂಧಿ' ಚಿತ್ರ ಪ್ರದರ್ಶನಗೊಂಡಿತು.

ವಿಜಯವಾಣಿ

ಬುಧವಾರ 10 ಏಪ್ರಿಲ್ 2019
10 APRIL 2019

# ಪ್ರಸ್ತುತ ಗಾಂಧಿ ತತ್ವ ಪ್ರಚಾರ ಅಗತ್ಯ

## ನಾಗತಿಹಳ್ಳಿ ಚಂದ್ರಶೇಖರ್ ಅಭಿಮತ I ಚಲನಚಿತ್ರೋತ್ಸವಕ್ಕೆ ಚಾಲನೆ

■ ವಿಜಯವಾಣಿ ಸುದ್ದಿಜಾಲ ಬೆಂಗಳೂರು

ಜನರಲ್ಲಿ ಲಾಲಸೆ, ದ್ವಾಹ ಹೆಚ್ಚುತ್ತಿದೆ. ಆದ್ದರಿಂದ ಈಗಿನ ಕಾಲಕ್ಕೆ ಗಾಂಧಿ ಹೆಚ್ಚು ಪ್ರಸ್ತುತ. ಗಾಂಧಿ ತತ್ವಗಳ ಬಗ್ಗೆ ಜನರಿಗೆ ತಿಳಿಸುವ ಆಲೋಚನೆಗಳನ್ನು ಬದಲಿಸಬೇಕಿದೆ ಎಂದು ಚಲನಚಿತ್ರ ಅಕಾಡೆಮಿ ಅಧ್ಯಕ್ಷ ನಾಗತಿಹಳ್ಳಿ ಚಂದ್ರಶೇಖರ್ ಹೇಳಿದ್ದಾರೆ.

ಭಾರತೀಯ ವಿದ್ಯಾಭವನ ಮತ್ತು ಚಲನಚಿತ್ರ ಅಕಾಡೆಮಿ ಸಹಯೋಗದಲ್ಲಿ ಮಹಾತ್ಮ ಗಾಂಧಿ ಅವರ 150ನೇ ಜನ್ಮ ದಿನದ ಅಂಗವಾಗಿ ಭಾರತೀಯ ವಿದ್ಯಾಭವನದ ಕೆಆರ್‌ಜಿ ಸಭಾಂಗಣದಲ್ಲಿ ಏರ್ಪಡಿಸಿರುವ 'ಮಹಾತ್ಮ ಗಾಂಧಿ-150' ಹೆಸರಿನ 3 ದಿನಗಳ ಚಲನಚಿತ್ರೋತ್ಸವ ಉದ್ಘಾಟಿಸಿ ಮಾತನಾಡಿದರು.

**ಪೂರ್ಣ ಸಾಧ್ಯವಾಗಿಲ್ಲ:** ನಾವು ಚಿಕ್ಕವರಿದ್ದಾಗಿನಿಂದ ಗಾಂಧಿ ಬಗ್ಗೆ ತಿಳಿದುಕೊಳ್ಳುತ್ತಲೇ ಇದ್ದೇವೆ. ಆದರೂ, ಪೂರ್ಣವಾಗಿ ತಿಳಿದುಕೊಳ್ಳಲು ಸಾಧ್ಯವಾಗಿಲ್ಲ. ಚಿತ್ರೋತ್ಸವದ ಮೂಲಕ ಗಾಂಧಿ ಬಗ್ಗೆ ಮತ್ತಷ್ಟು ತಿಳಿದುಕೊಳ್ಳುವ ಕೆಲಸವಾಗಬೇಕಿದೆ. ಅದರಲ್ಲೂ ಯುವ ಜನತೆಗೆ ಗಾಂಧಿ ಜೀವನ, ಸಂದೇಶಗಳನ್ನು ಮನಮುಟ್ಟುವಂತೆ ತಿಳಿಸಿಕೊಡಬೇಕು ಎಂದು ಹೇಳಿದರು.

ಚಲನಚಿತ್ರಗಳ ಬಗ್ಗೆ ಗಾಂಧಿ ಅವರಿಗೆ ಸಣ್ಣ ನಿರ್ಲಕ್ಷ್ಯವಿತ್ತು. ಯಾಂತ್ರಿಕವಾದ, ವ್ಯಾವಹಾರಿಕ ಕ್ಷೇತ್ರ ಅದು ಎಂದು ಭಾವಿಸಿದ್ದರು. ಕೊನೆಗೆ ದೃಶ್ಯ ಮಾಧ್ಯಮದ ಮೂಲಕವೇ ಅವರ ಬಗೆಗಿನ ಮಾಹಿತಿಗಳು ಜಗತ್ತಿಗೆ ತಿಳಿಸುವಂತಾಯಿತು. ಹೀಗಾಗಿ ದೃಶ್ಯ ಮಾಧ್ಯಮದ ಮೂಲಕ ಅವರನ್ನು ಜೀವಂತವಾಗಿಡಬೇಕಾಗಿದೆ ಎಂದರು.

ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ಡಾ. ವೂಡೆ ಪಿ. ಕೃಷ್ಣ, ಚಲನಚಿತ್ರ ಅಕಾಡೆಮಿ ರಿಜಿಸ್ಟ್ರಾರ್ ಎಚ್.ಬಿ. ದಿನೇಶ್, ಭಾರತೀಯ ವಿದ್ಯಾಭವನದ ನಿರ್ದೇಶಕ ಎಚ್.ಎನ್. ಸುರೇಶ್, ಪತ್ರಕರ್ತ ಶ್ರೀಧರಮೂರ್ತಿ ಮತ್ತಿತರರಿದ್ದರು.



ಚಲನಚಿತ್ರೋತ್ಸವವನ್ನು ನಾಗತಿಹಳ್ಳಿ ಚಂದ್ರಶೇಖರ್ ಉದ್ಘಾಟಿಸಿದರು. ಎಚ್.ಎನ್. ಸುರೇಶ್, ಚಿರಂಜೀವ್ ಸಿಂಗ್ ಮತ್ತಿತರರು ಉಪಸ್ಥಿತರಿದ್ದರು.



ಶಾಲಾ ಮಕ್ಕಳಿಗೆ ಗಾಂಧಿ ಸಿದ್ಧಾಂತವನ್ನು ಹೆಚ್ಚಾಗಿ ತಲುಪಿಸಬೇಕು. ಆ ಮೂಲಕ ಉತ್ತಮ ಸಮಾಜ ನಿರ್ಮಾಣ ಮಾಡಬೇಕಿದೆ. ಜನರಲ್ಲಿ ಓದುವ ಹವ್ಯಾಸ ಕಡಿಮೆಯಾಗಿದೆ. ಹೀಗಾಗಿ ಚಲನಚಿತ್ರದ ಮೂಲಕ ಜನರಿಗೆ ಗಾಂಧಿಯನ್ನು ತಲುಪಿಸುವ ಕೆಲಸವಾಗಬೇಕು.

I **ಚಿರಂಜೀವ್ ಸಿಂಗ್** ಯುನೆಸ್ಕೋ ಮಾಜಿ ರಾಯಭಾರಿ

ವಿಜಯ ಕರ್ನಾಟಕ ಬುಧವಾರ, 10 ಏಪ್ರಿಲ್ 2019

# ಮಹಾತ್ಮ ಗಾಂಧಿ 150 ಚಲನ ಚಿತ್ರೋತ್ಸವಕ್ಕೆ ಚಾಲನೆ



ಮಹಾತ್ಮಗಾಂಧಿ-ಚಲನಚಿತ್ರೋತ್ಸವ'ಕ್ಕೆ ಕರ್ನಾಟಕ ಚಲನಚಿತ್ರ ಅಕಾಡೆಮಿ ಅಧ್ಯಕ್ಷ ಡಾ. ನಾಗತಿಹಳ್ಳಿ ಚಂದ್ರಶೇಖರ್ ಚಾಲನೆ ನೀಡಿದರು. ಈ ವೇಳೆ ಎಚ್.ಎನ್. ಸುರೇಶ್, ಚಿರಂಜೀವ್ ಸಿಂಘ್, ವೂಡೆ ಪಿ. ಕೃಷ್ಣ ಮತ್ತಿತರರು ಉಪಸ್ಥಿತರಿದ್ದರು.

■ ವಿಕ ಸುದ್ದಿಲೋಕ ಬೆಂಗಳೂರು

ರಾಷ್ಟ್ರಪಿತ ಮಹಾತ್ಮ ಗಾಂಧೀಜಿಯವರ 150ನೇ ವರ್ಷಾಚರಣೆ ಅಂಗವಾಗಿ ಭಾರತೀಯ ವಿದ್ಯಾಭವನವು ಕರ್ನಾಟಕ ಚಲನಚಿತ್ರ ಅಕಾಡೆಮಿ ಸಹಯೋಗದೊಂದಿಗೆ ಮೂರು ದಿನಗಳ ಕಾಲ ಆಯೋಜಿಸಿರುವ 'ಮಹಾತ್ಮ ಗಾಂಧಿ-150' ಚಲನಚಿತ್ರೋತ್ಸವಕ್ಕೆ ಮಂಗಳವಾರ ಚಾಲನೆ ನೀಡಲಾಯಿತು.

ನಗರದ ರೇಸ್‌ಕೋರ್ಸ್ ರಸ್ತೆಯ ಭಾರತೀಯ ವಿದ್ಯಾಭವನದಲ್ಲಿ 'ಮಹಾತ್ಮಗಾಂಧಿ-ಚಲನಚಿತ್ರೋತ್ಸವ'ಕ್ಕೆ ಕರ್ನಾಟಕ ಚಲನಚಿತ್ರ ಅಕಾಡೆಮಿ ಅಧ್ಯಕ್ಷ ಡಾ. ನಾಗತಿಹಳ್ಳಿ ಚಂದ್ರಶೇಖರ್ ಚಾಲನೆ ನೀಡಿದರು. ಬಳಿಕ ಮಾತನಾಡಿದ ಅವರು, ಇತ್ತೀಚಿನ

## ಭಾರತೀಯ ವಿದ್ಯಾಭವನದಲ್ಲಿ ಪ್ರದರ್ಶನ

ದಿನಗಳಲ್ಲಿ ಯುವ ಪೀಳಿಗೆಯಲ್ಲಿ ಓದುವ ಹವ್ಯಾಸ ಕಡಿಮೆಯಾಗಿದೆ. ಆದರೆ, ಸಿನಿಮಾ ಮಾಧ್ಯಮದ ಮೂಲಕ ಗಾಂಧಿ ಸಾಧನೆ ತಿಳಿಸುವ ನಿಟ್ಟಿನಲ್ಲಿ ಚಿತ್ರೋತ್ಸವ ಆಯೋಜಿಸಲಾಗಿದೆ ಎಂದರು. ನಿವೃತ್ತ ಐಎಎಸ್ ಅಧಿಕಾರಿ ಚಿರಂಜೀವ್ ಸಿಂಘ್ ಕಾರ್ಯಕ್ರಮದ ಅಧ್ಯಕ್ಷತೆ ವಹಿಸಿದ್ದರು.

ಉದ್ಘಾಟನಾ ಸಮಾರಂಭದಲ್ಲಿ ಗಾಂಧಿ ಶಾಂತಿ ಪ್ರತಿಷ್ಠಾನದ ಅಧ್ಯಕ್ಷ ಡಾ. ವೂಡೇ ಪಿ. ಕೃಷ್ಣ, ಭಾರತೀಯ ವಿದ್ಯಾಭವನದ ನಿರ್ದೇಶಕ ಎಚ್.ಎನ್. ಸುರೇಶ್, ಪತ್ರಕರ್ತ ಶಶಿಧರ ಮತ್ತಿತರರು ಉಪಸ್ಥಿತರಿದ್ದರು.

## ಪ್ರದರ್ಶನಗೊಳ್ಳುವ ಸಿನಿಮಾಗಳು

ಮಹಾತ್ಮ ಗಾಂಧೀಜಿಯ ಬದುಕು ಹಾಗೂ ಚಿಂತನೆಗಳ ಮೇಲೆ ಬೆಳಕು ಚೆಲ್ಲುವ ವಿವಿಧ ಭಾಷೆಗಳ ಏಳು ಚಿತ್ರಗಳು ಭಾರತೀಯ ವಿದ್ಯಾಭವನದಲ್ಲಿ ಪ್ರದರ್ಶನಗೊಳ್ಳಲಿವೆ. ಮೊದಲ ದಿನವಾದ ಮಂಗಳವಾರ ಉದ್ಘಾಟನೆ ಬಳಿಕ ಆಸ್ಕರ್ ಪ್ರಶಸ್ತಿ ಪುರಸ್ಕೃತ 'ಗಾಂಧಿ' ಚಿತ್ರದ ಪ್ರದರ್ಶನ ನಡೆಯಿತು.

ಏ.10ರಂದು ಬೆಳಗ್ಗೆ 10.30ಕ್ಕೆ ಫಿರೋಜ್ ಅಬ್ಬಾಸ್ ಖಾನ್ ನಿರ್ದೇಶನದ 'ಗಾಂಧಿ ಮೈ ಫಾದರ್', ಮಧ್ಯಾಹ್ನ 2 ಗಂಟೆಗೆ ಗಿರೀಶ್ ಕಾಸರವಳ್ಳಿ ನಿರ್ದೇಶನದ 'ಕೂರ್ಮಾವತಾರ', ಸಂಜೆ 4.30ಕ್ಕೆ 'ಟ್ವೆಂಟಿಯತ್ ಸೆಂಚುರಿ ಪ್ರಾಫೆಟ್' ಚಿತ್ರಗಳು ಪ್ರದರ್ಶನಗೊಳ್ಳಲಿವೆ.

ಚಿತ್ರೋತ್ಸವದ ಕೊನೆಯ ದಿನ ಏ.11ರಂದು ಬೆಳಗ್ಗೆ ಹಿಂದಿ ಭಾಷೆಯ 'ಮೇಕಿಂಗ್ ಆಫ್ ಮಹಾತ್ಮ', ಮಧ್ಯಾಹ್ನ 2 ಗಂಟೆಗೆ 'ಗಾಂಧಿ ದೇವಿ' ಹಾಗೂ ಸಂಜೆ 4.30ಕ್ಕೆ ತಮಿಳು ಭಾಷೆಯ 'ವೆಲ್ಕಂ ಬ್ಯಾಕ್ ಗಾಂಧಿ' ಚಿತ್ರಗಳ ಪ್ರದರ್ಶನ ನಡೆಯಲಿದೆ.

# ಭಾರತದಲ್ಲಿಲ್ಲ ಗಾಂಧಿಯ ಉತ್ತಮ ದೃಶ್ಯ ತುಣುಕು...

ಸಂ.ಕ. ಸಮಾಚಾರ ಬೆಂಗಳೂರು

ಓದು ಕಡಿಮೆಯಾಗುತ್ತಿರುವ ಇಂದಿನ ಕಾಲದಲ್ಲಿ, ಮುಂದಿನ ಪೀಳಿಗೆಗೆ ಗಾಂಧೀಜಿ ಅವರ ತತ್ವ ಹಾಗೂ ವಿಚಾರಧಾರೆಗಳನ್ನು ದೃಶ್ಯ ಮಾಧ್ಯಮದ ಮೂಲಕವೂ ತಲುಪಿಸಬಹುದು ಎಂದು ಕರ್ನಾಟಕ ಚಲನಚಿತ್ರ ಅಕಾಡೆಮಿ ಅಧ್ಯಕ್ಷ ಡಾ. ನಾಗತಿಹಳ್ಳಿ ಚಂದ್ರಶೇಖರ್ ಅಭಿಪ್ರಾಯಪಟ್ಟರು.

- ಡಾ. ನಾಗತಿಹಳ್ಳಿ ಚಂದ್ರಶೇಖರ್ ಅಭಿಮತ
- ಲಂಡನ್‌ನಲ್ಲಿ ಗಾಂಧಿ ಗುಣಮಟ್ಟದ ದೃಶ್ಯಗಳು
- ಯುವ ಮನಸ್ಸು ತಲುಪಲು ಅಕಾಡೆಮಿ ಉತ್ತಮ ಕಾರ್ಯ



ಭಾರತೀಯ ವಿದ್ಯಾ ಭವನದಲ್ಲಿ ಕರ್ನಾಟಕ ಚಲನಚಿತ್ರ ಅಕಾಡೆಮಿ ಆಯೋಜಿಸಿದ್ದ ಮಹಾತ್ಮ ಗಾಂಧಿ–150 ಚಲನಚಿತ್ರೋತ್ಸವಕ್ಕೆ ಕರ್ನಾಟಕ ಚಲನಚಿತ್ರ ಅಕಾಡೆಮಿ ಅಧ್ಯಕ್ಷ ಡಾ. ನಾಗತಿಹಳ್ಳಿ ಚಂದ್ರಶೇಖರ್ ಚಾಲನೆ ನೀಡಿದರು. ಹಿರಿಯ ಮಾಜಿ ಐಎಎಸ್. ಅಧಿಕಾರಿ ಚಿರಂಜೀವಿ ಸಿಂಗ್ ಗಾಂಧಿ ಭಾವಚಿತ್ರಕ್ಕೆ ಪುಷ್ಪಾರ್ಪಣೆ ಮಾಡಿದರು.

ಭಾರತೀಯ ವಿದ್ಯಾಭವನದಲ್ಲಿ ಕರ್ನಾಟಕ ಚಲನಚಿತ್ರ ಅಕಾಡೆಮಿ ಆಯೋಜಿಸಿದ್ದ ಮಹಾತ್ಮ ಗಾಂಧಿ–150 ಚಲನಚಿತ್ರೋತ್ಸವ ಉದ್ಘಾಟಿಸಿ ಮಾತನಾಡಿದರು. ಗಾಂಧೀಜಿ ಅವರ ಗುಣಮಟ್ಟದ ದೃಶ್ಯ ತುಣುಕುಗಳು ಲಂಡನ್‌ನಲ್ಲಿ ಮಾತ್ರ ಇದ್ದು, ನಮ್ಮ ದೇಶದಲ್ಲಿ ಇಲ್ಲ ಎಂದು ತಿಳಿಯಿತು. ಇನ್ನಾದರೂ ಸಂಬಂಧಪಟ್ಟ ಸಂಘ–ಸಂಸ್ಥೆಗಳು ಗುಣಮಟ್ಟದ ದೃಶ್ಯಗಳನ್ನು ಸಂಗ್ರಹಿಸಲು ಮುಂದಾಗಬೇಕು ಎಂದರು.

ಗಾಂಧೀಜಿ ಅವರನ್ನು ನಾವು ಎಲ್ಲ ಸಂದರ್ಭಗಳಲ್ಲಿ ಒಪ್ಪದಿದ್ದರೂ, ಆ ಸಂತನ ಮುಂದೆ ಬಾಗಿ ಪ್ರಾರ್ಥಿಸಬೇಕಾಗುತ್ತದೆ. ಇದು ಗಾಂಧೀಜಿ ಅವರಿಗೆ ಇದ್ದ ಶಕ್ತಿಗಾಗಿ. ಗಾಂಧಿ ಅವರ ಚಿತ್ರಗಳನ್ನು ಪ್ರತಿ ಬಾರಿ ನೋಡುವಾಗ ಅವರ ವ್ಯಕ್ತಿತ್ವದ ವಿಭಿನ್ನ ಆಯಾಮವನ್ನು ತಿಳಿಯಬಹುದಾಗಿದ್ದು, ಗಾಂಧೀ ಚಿತ್ರೋತ್ಸವ ಎಂದರೆ ಪ್ರತಿವರ್ಷ ಆಚರಿಸುವ ಜಯಂತಿಯಲ್ಲ ಎಂದರು.

ಗಾಂಧೀಜಿ ಅವರಿಗೆ ವೈಯಕ್ತಿಕವಾಗಿ ಚಲನಚಿತ್ರಗಳ ಬಗ್ಗೆ ಅಷ್ಟಾಗಿ ಆಸಕ್ತಿ ಇರಲಿಲ್ಲ. ಅದು ಒಂದು ವ್ಯವಹಾರ ಎಂದು ನಿರ್ಲಕ್ಷ್ಯ ಮಾಡಿದ್ದರು. ಆದರೆ ಇಂದು ಚಲನಚಿತ್ರಗಳಿಂದಲೇ, ಜಗತ್ತಿನ ಎಲ್ಲಾ ವಯೋಮಾನದವರು ಗಾಂಧೀಜಿ ಅವರನ್ನು ತಿಳಿಯುವಂತಾಯಿತು. ಈ ನಿಟ್ಟಿನಲ್ಲಿ ತತ್ವ ಆಧಾರಿತ, ಸಿದ್ಧಾಂತ ಆಧಾರಿತ ಚಿತ್ರಗಳನ್ನು ಮಾಡುವಲ್ಲಿ ನಮ್ಮ ಅಕಾಡೆಮಿ ಮುಂದಾಗಿದೆ ಎಂದರು.

ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ಡಾ. ವೂಡೆ. ಪಿ. ಕೃಷ್ಣ ಮಾತನಾಡಿ, ಮಾತಿನ ಮೂಲಕವೂ ಕ್ರೌರ್ಯವನ್ನು ತೋರಿಸಬಹುದು ಎಂದು ಗಾಂಧಿ ತೋರಿಸಿಕೊಟ್ಟರು. ಆದರೆ ದೇಶದಲ್ಲಿ ಇಂದು ರಚನಾತ್ಮಕ ಟೀಕೆಗಳು ಮರೆಯಾಗಿ ಕಟು ವಿರೋಧಿ ಟೀಕೆಗಳು ನಡೆಯುತ್ತಿವೆ. ಸತ್ಯ ಹಾಗೂ ಅಹಿಂಸೆಗಳನ್ನು ಪಾಲಿಸಿದರೆ ನಾವು ಗಾಂಧೀಜಿ ಅವರನ್ನು ಗಂಭೀರವಾಗಿ ಪರಿಗಣಿಸಿದಂತೆ. ದೇಶದಲ್ಲಿ ಸಹಭಾಗಿತ್ವ ಶಕ್ತಿ ಉಳಿಯಬೇಕು ಎಂದರೆ ಗಾಂಧೀ ತತ್ವಗಳು ಉಳಿಯಬೇಕು. ಯುವ ಮನಸ್ಸುಗಳನ್ನು ತಲುಪಲು ಅಕಾಡೆಮಿ ಉತ್ತಮ ಕಾರ್ಯಕ್ಕೆಗೊಂಡಿದೆ ಎಂದರು.

1982ರಲ್ಲಿ ತೆರೆ ಕಂಡ ಆಸ್ಕರ್ ಪ್ರಶಸ್ತಿ ಪಡೆದ 'ಗಾಂಧಿ' ಚಿತ್ರವನ್ನು ಪ್ರದರ್ಶಿಸಲಾಯಿತು. ವೇದಿಕೆಯಲ್ಲಿ ಕರ್ನಾಟಕ ಚಲನಚಿತ್ರ ಅಕಾಡೆಮಿ ರಿಜಿಸ್ಟ್ರಾರ್ ಎಚ್.ಬಿ. ದಿನೇಶ್, ಹಿರಿಯ ಮಾಜಿ ಐಎಎಸ್ ಅಧಿಕಾರಿ ಚಿರಂಜೀವಿ ಸಿಂಗ್ ಸೇರಿದಂತೆ ಇನ್ನಿತರರು ಉಪಸ್ಥಿತರಿದ್ದರು.

ಈ ಸಂಜೆ

ಮಂಗಳವಾರ, 9-4-2019



ಬೆಂಗಳೂರಿನ ಭಾರತೀಯ-ವಿದ್ಯಾಭವನದಲ್ಲಿಂದು ಹಮ್ಮಿಕೊಂಡಿದ್ದ ಮಹಾತ್ಮಗಾಂಧಿ -150 ಚಲನಚಿತ್ರೋತ್ಸವ ಕಾರ್ಯಕ್ರಮದಲ್ಲಿ ಕರ್ನಾಟಕ ಚಲನಚಿತ್ರ ಅಕಾಡೆಮಿ ಅಧ್ಯಕ್ಷ ಡಾ. ನಾಗತಿಹಳ್ಳಿ ಚಂದ್ರಶೇಖರ್, ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ಡಾ. ವೂಡೆ ಪಿ. ಕೃಷ್ಣ, ಯುನೆಸ್ಕೋದ ಮಾಜಿ ರಾಯಭಾರಿ ಚಿರಂಜೀವಿ ಸಿಂಗ್, ಮುಖ್ಯಮಂತ್ರಿಗಳ ಮಾಧ್ಯಮ ಕಾರ್ಯದರ್ಶಿ ದಿನೇಶ್ ಮತ್ತಿತರರು ಉಪಸ್ಥಿತರಿದ್ದರು.



ಭಾರತೀಯ ವಿದ್ಯಾಭವನ ಮತ್ತು ಕರ್ನಾಟಕ ಚಲನಚಿತ್ರ ಅಕಾಡೆಮಿ ವತಿಯಿಂದ ಇಂದು ನಡೆದ ಮಹಾತ್ಮ ಗಾಂಧಿ -150 ಚಲನಚಿತ್ರೋತ್ಸವವನ್ನು ನಿವೃತ್ತ ಐಎಎಸ್ ಅಧಿಕಾರಿ ಚಿರಂಜೀವಿ ಸಿಂಗ್ ಉದ್ಘಾಟಿಸಿದರು. ಅಧ್ಯಕ್ಷ ಡಾ.ನಾಗತಿಹಳ್ಳಿ ಚಂದ್ರ ಶೇಖರ್, ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ಡಾ.ವೂಡೆ ಪಿ.ಕೃಷ್ಣ, ಮುಖ್ಯಮಂತ್ರಿ ಪತ್ರಿಕಾ ಕಾರ್ಯದರ್ಶಿ ಹೆಚ್.ಬಿ.ದಿನೇಶ್ ಮತ್ತಿತರರು ಇದ್ದಾರೆ.

ವಾರ್ತಾ ಭಾರತಿ

# ಗಾಂಧಿ ವಿಚಾರಧಾರೆ ದೃಶ್ಯ ಮಾಧ್ಯಮದಿಂದ ತಲುಪಲಿ



ಬೆಂಗಳೂರು, ಎ.9: ಮುಂದಿನ ಪೀಳಿಗೆಗೆ ಗಾಂಧೀಜಿ ಅವರ ತತ್ವ ಹಾಗೂ ವಿಚಾರಧಾರೆಗಳನ್ನು ದೃಶ್ಯ ಮಾಧ್ಯಮದ ಮೂಲಕ ತಲುಪಲಿ ಎಂದು ಕರ್ನಾಟಕ ಚಲನಚಿತ್ರ ಅಕಾಡೆಮಿ ಅಧ್ಯಕ್ಷ ನಾಗತಿಹಳ್ಳಿ ಚಂದ್ರಶೇಖರ್ ಹೇಳಿದರು.

ಮಂಗಳವಾರ ನಗರದ ರೇಸ್ ಕೋರ್ಸ್ ರಸ್ತೆಯ ಭಾರತೀಯ ವಿದ್ಯಾ ಭವನದಲ್ಲಿ ಕರ್ನಾಟಕ ಚಲನಚಿತ್ರ ಅಕಾಡೆಮಿ ಆಯೋಜಿಸಿದ್ದ ಮಹಾತ್ಮ ಗಾಂಧಿ-150 ಚಲನಚಿತ್ರೋತ್ಸವ ಉದ್ಘಾಟಿಸಿ ಅವರು ಮಾತನಾಡಿದರು.

ಗಾಂಧೀಜಿ ಅವರ ಗುಣಮಟ್ಟದ ದೃಶ್ಯ ತುಣುಕುಗಳು ಲಂಡನ್‌ನಲ್ಲಿ ಮಾತ್ರ ಇದ್ದು, ನಮ್ಮ ದೇಶದಲ್ಲಿ ಇಲ್ಲ ಎಂದು ತಿಳಿಯಿತು. ಇನ್ನಾದರೂ ಸಂಬಂಧಪಟ್ಟ ಸಂಘ ಸಂಸ್ಥೆಗಳು ಗುಣಮಟ್ಟದ ದೃಶ್ಯಗಳನ್ನು ಸಂಗ್ರಹಿಸಲು ಮುಂದಾಗಬೇಕು ಎಂದು ಮನವಿ ಮಾಡಿದರು.

ಗಾಂಧೀಜಿ ಅವರಿಗೆ ವೈಯಕ್ತಿಕವಾಗಿ ಚಲನಚಿತ್ರಗಳ ಬಗ್ಗೆ ಅಷ್ಟಾಗಿ ಆಸಕ್ತಿ ಇರಲಿಲ್ಲ. ಅದು ಒಂದು ವ್ಯವಹಾರ ಎಂದು ನಿರ್ಲಕ್ಷ್ಯ ಮಾಡಿದ್ದರು. ಆದರೆ ಅವರ ಕತೆ ಆಧರಿಸಿದ ಚಲನಚಿತ್ರಗಳಿಂದಲೇ, ಜಗತ್ತಿನ ಎಲ್ಲಾ ವಯೋಮಾನದವರು ಗಾಂಧೀಜಿ ಅವರನ್ನು ತಿಳಿಯುವಂತಾಯಿತು. ಈ ನಿಟ್ಟಿನಲ್ಲಿ ತತ್ವ ಆಧಾರಿತ, ಸಿದ್ಧಾಂತ ಆಧಾರಿತ ಚಿತ್ರಗಳನ್ನು ಮಾಡುವಲ್ಲಿ ನಮ್ಮ ಅಕಾಡೆಮಿ ಮುಂದಾಗಿದೆ ಎಂದರು.

"ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ಡಾ.ವೂಡೆ. ಪಿ.ಕೃಷ್ಣ" ಮಾತನಾಡಿ, ಗಾಂಧಿ ಅವರು ಮಾತಿನ ಮೂಲಕವೂ ಕ್ರೌರ್ಯವನ್ನು ತೋರಿಸಬಹುದು ಎಂದು ತೋರಿಸಿಕೊಟ್ಟವರು. ಆದರೆ, ದೇಶದಲ್ಲಿ ಇಂದು ರಚನಾತ್ಮಕ ಟೀಕೆಗಳು ಮರೆಯಾಗಿ

**ನಾಗತಿಹಳ್ಳಿ**

ಕಟು ವ್ಯಂಗ್ಯೋಕ್ತಿಗಳು, ಟೀಕೆಗಳು ವಿಜೃಂಭಿಸುತ್ತಿವೆ.

ಸತ್ಯ ಹಾಗೂ ಅಹಿಂಸೆಗಳನ್ನು ಪಾಲಿಸಿದರೆ ನಾವು ಗಾಂಧೀಜಿ ಅವರನ್ನು ಗಂಭೀರವಾಗಿ ಪರಿಗಣಿಸಿದಂತೆ. ದೇಶದಲ್ಲಿ ಸುಭಾಗ್ಯ ಶಕ್ತಿ ಉಳಿಯಬೇಕು ಎಂದರೆ, ಗಾಂಧೀ ತತ್ವಗಳು ಉಳಿಯಬೇಕು ಎಂದು ಹೇಳಿದರು.

ಇದೇ ವೇಳೆ 1982ರಲ್ಲಿ ತೆರೆ ಕಂಡ ಆಸ್ಕರ್ ಪ್ರಶಸ್ತಿ ಪಡೆದ ಗಾಂಧಿ ಚಿತ್ರವನ್ನು ಪ್ರದರ್ಶಿಸಲಾಯಿತು. ವೇದಿಕೆಯಲ್ಲಿ ನಿವೃತ್ತ ಐಎಎಸ್ ಅಧಿಕಾರಿ ಚಿರಂಜೀವಿ ಸಿಂಗ್ ಸೇರಿದಂತೆ ಪ್ರಮುಖರು ಉಪಸ್ಥಿತರಿದ್ದರು.

ಪ್ರಜಾವಾಣಿ ಶುಕ್ರವಾರ ○ ಮಾರ್ಚ್ 15, 2019



ಬೆಂಗಳೂರಿನಲ್ಲಿನ ಗಾಂಧಿ ಭವನದ ಹೊರನೋಟ

# ಗಾಂಧಿ ಭವನ ನಿರ್ಮಾಣಕ್ಕೆ ಸೂಚನೆ

ಬೆಂಗಳೂರು: ಮಹಾತ್ಮ ಗಾಂಧೀಜಿ ಅವರ 150ನೇ ಜನ್ಮ ವರ್ಷಾಚರಣೆ ಹಿನ್ನೆಲೆಯಲ್ಲಿ ಪ್ರಗತಿಯಲ್ಲಿರುವ ಜಿಲ್ಲೆಗೊಂದು ಗಾಂಧಿ ಭವನ ನಿರ್ಮಾಣ ಕಾಮಗಾರಿಗಳನ್ನು ಅಕ್ಟೋಬರ್ ಒಳಗೆ ಪೂರ್ಣಗೊಳಿಸಿ ಎಂದು ಮುಖ್ಯಮಂತ್ರಿ ಎಚ್.ಡಿ.ಕುಮಾರಸ್ವಾಮಿ ಸೂಚಿಸಿದ್ದಾರೆ.

ಈ ಸಂಬಂಧ ಎಲ್ಲ ಜಿಲ್ಲಾಧಿಕಾರಿಗಳಿಗೆ ಆದೇಶ ನೀಡಿ ಎಂದು ಮುಖ್ಯಮಂತ್ರಿ ಅವರು ರಾಜ್ಯ ಸರ್ಕಾರದ ಮುಖ್ಯ ಕಾರ್ಯದರ್ಶಿಗೆ ಸೂಚಿಸಿದ್ದಾರೆ.

'ರಾಜ್ಯದ ಬಹುತೇಕ ಜಿಲ್ಲೆಗಳಲ್ಲಿ ಗಾಂಧಿ ಭವನದ ನಿರ್ಮಾಣಕ್ಕೆ ಸ್ಥಳ ಕಾಯ್ದಿರಿಸಿ, ನೀಲನಕ್ಷೆ ತಯಾರು ಮಾಡಲಾಗಿದೆ. ಗಾಂಧೀಜಿ ಅವರ 150ನೇ ಜನ್ಮ ವರ್ಷಾಚರಣೆ ಮುಗಿಯುವುದರೊಳಗೆ ಭವನ ನಿರ್ಮಾಣ ಕಾಮಗಾರಿ ಪೂರ್ಣಗೊಳಿಸಲು ಸೂಚನೆ ನೀಡಬೇಕು' ಎಂದು ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ವೂಡೇ ಪಿ.ಕೃಷ್ಣ ಅವರು ಮನವಿ ಮಾಡಿದ್ದರು.

ಗಾಂಧಿ ವಿಚಾರಗಳನ್ನು ಪಸರಿಸುವ ಉದ್ದೇಶದಿಂದ, ಮುಖ್ಯಮಂತ್ರಿಯಾಗಿದ್ದ ಸಿದ್ದರಾಮಯ್ಯ ಅವರು ಜಿಲ್ಲೆಗೊಂದು ಗಾಂಧಿ ಭವನ ನಿರ್ಮಿಸಲು ಯೋಜಿಸಿ ಅನುದಾನ ಬಿಡುಗಡೆ ಮಾಡಿದ್ದರು. ಆದರೆ ಕಾಮಗಾರಿಗಳು ಪ್ರಗತಿ ಕಾಣದೇ ಕುಂಠಿತಗೊಂಡಿದ್ದವು.

ಸಂಯುಕ್ತ ಕರ್ನಾಟಕ 15 ಮಾರ್ಚ್ 2019

# ಜಿಲ್ಲೆಗೊಂದು ಗಾಂಧಿ ಭವನ

ಬೆಂಗಳೂರು: ಜಿಲ್ಲೆಗೊಂದು ಗಾಂಧಿ ಭವನ ನಿರ್ಮಾಣ ಕಾರ್ಯವನ್ನು ಅಕ್ಟೋಬರ್ 2019 ಒಳಗೆ ಪೂರ್ಣಗೊಳಿಸಬೇಕು ಎಂದು ಎಲ್ಲಾ ಜಿಲ್ಲಾಧಿಕಾರಿಗಳಿಗೆ ಸಿಎಂ ಕುಮಾರಸ್ವಾಮಿ ಸೂಚನೆ ನೀಡಿದ್ದಾರೆ.

ಗಾಂಧಿ ತತ್ವ, ಚಿಂತನೆಗಳನ್ನು ಪಸ-ರಿಸುವ 'ಜಿಲ್ಲೆಗೊಂದು ಗಾಂಧಿ ಭವನ' ಯೋಜನೆಯನ್ನು ಮಾಜಿ ಮುಖ್ಯಮಂತ್ರಿ ಸಿದ್ದರಾಮಯ್ಯ ಅವರು ಆರಂಭ ಮಾಡಿ, ಪ್ರತಿ ಜಿಲ್ಲೆಗೂ ಹಣ ಬಿಡುಗಡೆ ಮಾಡಿದ್ದರು. ಆದರೆ, ಭವನ ನಿರ್ಮಾಣ ಕಾರ್ಯ ಕುಂಠಿತವಾಗಿತ್ತು.

ಈ ಹಿನ್ನೆಲೆಯಲ್ಲಿ ಸ್ಥಗಿತಗೊಂಡಿದ್ದ ಜಿಲ್ಲೆಗೊಂದು ಗಾಂಧಿ ಭವನ ನಿರ್ಮಾಣ ಕಾರ್ಯವನ್ನು ಬಾ-ಬಾಪು 150ನೇ ವರ್ಷಾಚರಣೆಯಲ್ಲಿ ಪೂರ್ಣಗೊಳಿಸುವಂತೆ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ವೂಡೇ ಪಿ. ಕೃಷ್ಣ ಅವರು ಸರ್ಕಾರಕ್ಕೆ ಮನವಿ ಮಾಡಿದ್ದರು. ಪ್ರಸ್ತುತ ಮುಖ್ಯಮಂತ್ರಿ ಎಚ್.ಡಿ. ಕುಮಾರಸ್ವಾಮಿ ಅವರು ಸರ್ಕಾರದ ಮುಖ್ಯ ಕಾರ್ಯದರ್ಶಿಗಳಿಗೆ ಎಲ್ಲ ಜಿಲ್ಲಾಧಿಕಾ-ರಿಗಳಿಗೂ ಅಕ್ಟೋಬರ್ 2019ರ ಒಳಗೆ ನಿರ್ಮಾಣ ಕಾರ್ಯ ಪೂರ್ಣಗೊಳಿಸಲು ಸೂಚನೆ ನೀಡುವಂತೆ ಆದೇಶ ನೀಡಿದ್ದಾರೆ.

ಗುರುವಾರ, 14 ಮಾರ್ಚ್ 2019, ಬೆಂಗಳೂರು
ವಿಜಯ ಕರ್ನಾಟಕ VK

# ಜಿಲ್ಲೆಗೊಂದು ಗಾಂಧಿ ಭವನಕ್ಕೆ ಸೂಚನೆ

**ಬೆಂಗಳೂರು:** ಜಿಲ್ಲೆಗೊಂದು ಗಾಂಧಿ ಭವನ ನಿರ್ಮಾಣ ಮಾಡುವಂತೆ, ರಾಜ್ಯದ ಎಲ್ಲಾ ಜಿಲ್ಲಾಧಿಕಾರಿಗಳಿಗೆ ಸಿಎಂ ಸೂಚಿಸಿದ್ದಾರೆ.

ಬಾಪು 150ನೇ ವರ್ಷಾಚರಣೆ ಹಿನ್ನೆಲೆಯಲ್ಲಿ 2019ರ ಅಕ್ಟೋಬರ್‌ನೊಳಗೆ ಈ ಕಾರ್ಯ ಪೂರ್ಣಗೊಳಿಸುವಂತೆ ಮುಖ್ಯ ಕಾರ್ಯದರ್ಶಿಗಳಿಗೆ ಸೂಚಿಸಿದ್ದಾರೆ.

ಸಿದ್ದರಾಮಯ್ಯ ಸಿಎಂ ಆಗಿದ್ದಾಗ ಜಿಲ್ಲೆಗೊಂದು ಗಾಂಧಿ ಭವನ ಸ್ಥಾಪನೆಗಾಗಿ ಎಲ್ಲ ಜಿಲ್ಲೆಗಳಿಗೂ ಹಣ ಬಿಡುಗಡೆ ಮಾಡಿದ್ದರು. ಅದರಂತೆ ಬಹುಪಾಲು ಜಿಲ್ಲೆಗಳಲ್ಲಿ ಗಾಂಧಿಭವನ ನಿರ್ಮಾಣಕ್ಕಾಗಿ ಸ್ಥಳ ಕಾಯ್ದಿರಿಸಿ, ನೀಲನಕ್ಷೆ ತಯಾರಿಸಲಾಗಿತ್ತು, ನಂತರ ಸರಕಾರ ಬದಲಾಗಿ ಈ ಕೆಲಸ ಅರ್ಧಕ್ಕೆ ಸ್ಥಗಿತಗೊಂಡಿತ್ತು.

ಇದನ್ನು ನೆನಪಿಸಿ ಗಾಂಧಿಭವನ ನಿರ್ಮಾಣ ಕಾರ್ಯವನ್ನು ಬಾಪು 150ನೇ ವರ್ಷಾಚರಣೆಯಲ್ಲಿ ಪೂರ್ಣಗೊಳಿಸುವಂತೆ ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ಡಾ.ವೂಡೇ ಪಿ. ಕೃಷ್ಣ ಅವರು ಸಿಎಂಗೆ ಪತ್ರ ಬರೆದಿದ್ದರು.

ನಂ. 1 ಕನ್ನಡ ದಿನಪತ್ರಿಕೆ
VIJAYAVANI :: BENGALURU
ಬುಧವಾರ 13 ಮಾರ್ಚ್ 2019
13 MARCH 2019

# ಭಾರತೀಯತೆ ಅಳವಡಿಸಿಕೊಳ್ಳಿ

ವಿಜಯವಾಣಿ ಚಿತ್ರ



ರಾಜ್ಯಮಟ್ಟದ ಯುವಜನ ಸಮ್ಮೇಳನದ ಉದ್ಘಾಟನೆ ವೇಳೆ ಸಮ್ಮೇಳನಾಧ್ಯಕ್ಷ ಡಾ. ಡಿ.ಕೆ. ಚಿತ್ತಯ್ಯ ಪೂಜಾರ್, ಡಾ. ಮನು ಬಳಿಗಾರ್, ವೂಡೇ ಪಿ.ಕೃಷ್ಣ ಮತ್ತಿತರರು ಪಾಲ್ಗೊಂಡಿದ್ದರು.

» ವೂಡೇ ಪಿ.ಕೃಷ್ಣ ಸಲಹೆ

» ಯುವಜನ ಸಮ್ಮೇಳನ

ವಿಜಯವಾಣಿ ಸುದ್ದಿಜಾಲ ಬೆಂಗಳೂರು

ಪಾಶ್ಚಿಮಾತ್ಯ ಶಿಕ್ಷಣ ಪಡೆದರೂ ಸಂಪೂರ್ಣ ಭಾರತೀಯತೆಯನ್ನು ಮೈಗೂಡಿಸಿಕೊಂಡಿದ್ದ ವಿವೇಕಾನಂದರು ಮತ್ತು ಮಹಾತ್ಮಗಾಂಧಿ ಅವರ ಆದರ್ಶಗಳು ಸಮಾಜಕ್ಕೆ ಮಾರ್ಗದರ್ಶಿಯಾಗಿವೆ. ಅವರ ಚಿಂತನೆ ಭಾರತದ್ದಾಗಿದ್ದರೂ, ವಿಶ್ವದ ದೃಷ್ಟಿಯನ್ನು ಹೊಂದಿವೆ ಎಂದು ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ಡಾ.ವೂಡೇ ಪಿ. ಕೃಷ್ಣ ಹೇಳಿದ್ದಾರೆ.

ಬುದ್ಧ ಬಸವ ಗಾಂಧಿ ಸಾಂಸ್ಕೃತಿಕ ಟ್ರಸ್ಟ್ ಶೇಷಾದ್ರಿಪುರಂ ಕಾಲೇಜಿನಲ್ಲಿ ಏರ್ಪಡಿಸಿದ್ದ 'ಮಹಾತ್ಮ ಗಾಂಧೀಜಿ- ವಿವೇಕಾನಂದ ಪ್ರಣೀತ' ರಾಜ್ಯಮಟ್ಟದ ಯುವಜನ ಸಮ್ಮೇಳನದಲ್ಲಿ ಮಾತನಾಡಿದರು. ವಿವೇಕಾನಂದರು ಮತ್ತು ಗಾಂಧೀಜಿ ಇಬ್ಬರು ವಿಶ್ವದ ನಾಯಕರಾಗಿ ಗಮನಸೆಳೆದರು. ಯುವ ಸಮೂಹ ಈ ಇಬ್ಬರ ಕುರಿತು ಅಧ್ಯಯನ ಮಾಡಬೇಕೆಂದರು.

ಪಾಕಿಸ್ತಾನದಲ್ಲೂ ಹಿಂದುಸ್ತಾನವನ್ನು ಪ್ರೀತಿಸುವ ಸ್ನೇಹಜೀವಿಗಳಿದ್ದಾರೆ. ಯುದ್ಧಕ್ಕಿಂತ ಮಾನವೀಯತೆ ದೊಡ್ಡದಾಗಲಿ ಎಂದು ಕಸಾಪ ಅಧ್ಯಕ್ಷ ಡಾ. ಮನು ಬಳಿಗಾರ್ ಹೇಳಿದರು.

**ವಿಚಾರ, ಕವಿಗೋಷ್ಠಿ:** ಸಮ್ಮೇಳನದ ಭಾಗವಾಗಿ ವಿವಿಧ ಗೋಷ್ಠಿಗಳು ನಡೆದವು. ಡಾ.ಚಿತ್ತಯ್ಯ ಪೂಜಾರ್ ಅವರ ಬದುಕು ಬರಹ ಕುರಿತು ತುಮಕೂರು ವಿವಿ ಪ್ರಾಧ್ಯಾಪಕ ಡಾ. ಶಿವಣ್ಣ ಬೆಳವಾಡಿ ವಿಚಾರ ಮಂಡಿಸಿದರು. ವಾಗ್ಮಿ ಡಾ.ಕೆ.ಪಿ. ಪುತ್ತೂರಾಯ ವಿಶೇಷ ಉಪನ್ಯಾಸ ನೀಡಿದರು.

## ಯಾಂತ್ರಿಕೃತ ಬದುಕು ಬೇಡ

ಯಂತ್ರಗಳ ಅತಿಯಾದ ಅವಲಂಬನೆ ಮತ್ತು ಸರ್ಕಾರಿ ಉದ್ಯೋಗ ನಿರೀಕ್ಷಿಸುವ ಬದಲು ಸ್ವಯಂ ಉದ್ಯೋಗಕ್ಕೆ ಯುವಸಮೂಹ ಮುಂದಾಗಬೇಕೆಂದು ಸಮ್ಮೇಳನದ ಅಧ್ಯಕ್ಷ ಡಾ. ಡಿ.ಕೆ. ಚಿತ್ತಯ್ಯ ಪೂಜಾರ್ ಕರೆ ನೀಡಿದರು. ಗ್ರಾಮಗಳು ವೃದ್ಧಾಶ್ರಮದಂತೆ ಭಾಸವಾಗುತ್ತಿದ್ದು, ಯುವ ಸಮೂಹ ಹಳ್ಳಿ ತೊರೆದು ನಗರಗಳಿಗೆ ವಲಸೆ ಬರುತ್ತಿದ್ದಾರೆ. ಸ್ಥಳೀಯ ಮಟ್ಟದಲ್ಲಿನ ಅವರ ಕೆಲಸಕ್ಕೆ ಗೌರವ ಸಿಕ್ಕರೆ ಹಳ್ಳಿಗಳನ್ನು ತೊರೆಯುವುದಿಲ್ಲ ಎಂದು ಅಭಿಪ್ರಾಯಪಟ್ಟರು.

ಸಂಜೆವಾಣಿ

ಬುಧವಾರ 13 ಮಾರ್ಚ್ 2019

# ಜಿಲ್ಲೆಗೊಂದು ಗಾಂಧಿ ಭವನ ನಿರ್ಮಾಣಕ್ಕೆ ಸಿಎಂ ಸೂಚನೆ

ಬೆಂಗಳೂರು, ಮಾ 13– ರಾಜ್ಯದಲ್ಲಿ ಜಿಲ್ಲೆಗೊಂದು ಗಾಂಧಿ ಭವನ ನಿರ್ಮಾಣ ಮಾಡುವಂತೆ ಮುಖ್ಯಮಂತ್ರಿಗಳು ಎಲ್ಲಾ ಜಿಲ್ಲಾಧಿಕಾರಿಗಳಿಗೆ ಸೂಚನೆ ನೀಡಿದ್ದಾರೆ.

ಬಾಬಾಪು 150ನೇ ವರ್ಷಾಚರಣೆ ಸಂಭ್ರಮದ ಹಿನ್ನೆಲೆಯಲ್ಲಿ 2019ರ ಅಕ್ಟೋಬರ್ ತಿಂಗಳೊಳಗೆ ಜಿಲ್ಲೆಗೊಂದು ಗಾಂಧಿ ಭವನ ನಿರ್ಮಾಣ ಕಾರ್ಯವನ್ನು ಪೂರ್ಣಗೊಳಿಸುವಂತೆ. ಎಲ್ಲಾ ಜಿಲ್ಲಾಧಿಕಾರಿಗಳಿಗೆ ಸೂಚನೆ ನೀಡುವಂತೆ ಮುಖ್ಯಮಂತ್ರಿಗಳು ಸರಕಾರದ ಮುಖ್ಯ ಕಾರ್ಯದರ್ಶಿಗಳಿಗೆ ಸೂಚಿಸಿದ್ದಾರೆ.

ಬಹುಪಾಲು ಜಿಲ್ಲೆಗಳಲ್ಲಿ ಗಾಂಧಿಭವನ ನಿರ್ಮಾಣಕ್ಕಾಗಿ ಸ್ಥಳ ಕಾಯ್ದಿರಿಸಿ ನೀಲಿನಕ್ಷೆ ತಯಾರು ಮಾಡಲಾಗಿದೆ. ಸ್ಥಗಿತಗೊಂಡಿರುವ ಜಿಲ್ಲೆಗೊಂಡು ಗಾಂಧಿಭವನ ನಿರ್ಮಾಣ ಕಾರ್ಯವನ್ನು ಬಾ–ಬಾಪು 150ನೇ ವರ್ಷಾಚರಣೆಯಲ್ಲಿ ಪೂರ್ಣಗೊಳಿಸುವಂತೆ ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ಡಾ.ವೂಡೇ ಪಿ. ಕೃಷ್ಣ ಅವರು ರಾಜ್ಯಸರಕಾರಕ್ಕೆ ಮನವಿ ಮಾಡಿದ್ದ ಹಿನ್ನಲೆಯಲ್ಲಿ ಮುಖ್ಯಮಂತ್ರಿ ಸೂಚನೆ ನೀಡಿದ್ದಾರೆ.

ಮಾನವೀಯ ಮೌಲ್ಯಗಳನ್ನು ಗಾಂಧಿವಿಚಾರಗಳ ಮೂಲಕ ಬಿತ್ತುವ ಮಹತ್ವಾಕಾಂಕ್ಷೆ ಯೋಜನೆಯನ್ನು 'ಜಿಲ್ಲೆಗೊಂದು ಗಾಂಧಿಭವನ' ಸ್ಥಾಪನೆ ಮೂಲಕ ನಿಕಟಪೂರ್ವ ಮುಖ್ಯಮಂತ್ರಿಗಳಾದ ಸಿದ್ದರಾಮಯ್ಯ ಅವರು ಪ್ರಾರಂಭ ಮಾಡಿ ಪ್ರತಿ ಜಿಲ್ಲೆಯ ಜಿಲ್ಲಾಧಿಕಾರಿಗಳಿಗೆ ಹಣ ಬಿಡುಗಡೆ ಮಾಡಿದ್ದರು, ಆದರೆ ಗಾಂಧಿಭವನ ನಿರ್ಮಾಣ ಪ್ರಗತಿ ಕಾಣದೇ ಕುಂಟಿತವಾಗಿತ್ತು. ಈ ಸಂಬಂಧ "ಡಾ.ವೂಡೇ ಪಿ. ಕೃಷ್ಣ" ಅವರು ಸಿಎಂ ಅವರಲ್ಲಿ ಮನವಿ ಸಲ್ಲಿಸಿ ಸ್ಥಗಿತಗೊಂಡಿದ್ದ ಗಾಂಧಿಭವನ ನಿರ್ಮಾಣ ಕಾರ್ಯ ತ್ವರಿತಗೊಳಿಸವಂತೆ ಒತ್ತಾಯಿಸಿದ್ದರು

ಬುಧವಾರ, 13-3-2019

# ಜಿಲ್ಲೆಗೊಂದು ಗಾಂಧಿ ಭವನಕ್ಕೆ ಸಿಎಂ ಸೂಚನೆ



ಬೆಂಗಳೂರು, ಮಾ.13- ಬಾ-ಬಾಪು 150ನೇ ವರ್ಷಾಚರಣೆ ಹಿನ್ನೆಲೆಯಲ್ಲಿ ಅಕ್ಟೋಬರ್ 2019ರೊಳಗೆ ಜಿಲ್ಲೆಗೊಂದು ಗಾಂಧಿ ಭವನ ನಿರ್ಮಾಣ ಕಾರ್ಯವನ್ನು ಪೂರ್ಣಗೊಳಿಸುವ ಬಗ್ಗೆ ಎಲ್ಲಾ ಜಿಲ್ಲಾಧಿಕಾರಿಗಳಿಗೂ ಸೂಚನೆ ನೀಡುವಂತೆ ಸಿಎಂ.ಕುಮಾರಸ್ವಾಮಿ ಅವರು ಸರ್ಕಾರ ಮುಖ್ಯ ಕಾರ್ಯದರ್ಶಿ ಸೂಚನೆ ನೀಡಿದ್ದಾರೆ.

ಎಲ್ಲಾ ಜಿಲ್ಲೆಗಳಲ್ಲಿ ಗಾಂಧಿಭವನದ ನಿರ್ಮಾಣಕ್ಕೆ ಸ್ಥಳ ಕಾಯ್ದಿರಿಸಿ ನೀಲಿನಕ್ಷೆ ತಯಾರು ಮಾಡಿದೆ. ಗಾಂಧಿಭವನ ನಿರ್ಮಾಣ ಕಾರ್ಯವನ್ನು ಬಾ-ಬಾಪು 150ನೇ ವರ್ಷಾಚರಣೆಯಲ್ಲಿ ಪೂರ್ಣಗೊಳಿಸುವಂತೆ ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷರು ಡಾ. ವೂಡೇ ಪಿ. ಕೃಷ್ಣರವರು ರಾಜ್ಯ ಸರ್ಕಾರಕ್ಕೆ ಮನವಿ ಮಾಡಿದ್ದಾರ ಹಿನ್ನಲೆಯಲ್ಲಿ ಈ ಸೂಚನೆಯನ್ನು ಮುಖ್ಯಮಂತ್ರಿಗಳು ನೀಡಿದ್ದಾರೆ.

ವಿಶ್ವವಾಣಿ

ಬೆಂಗಳೂರು
vishwavani.news
11.03.2019 ಸೋಮವಾರ

## ರಾಜ್ಯಮಟ್ಟದ ಯುವಜನ ಸಮ್ಮೇಳನದಲ್ಲಿ ಸಂಶೋಧಕ ಡಾ.ಡಿ.ಕೆ.ಚಿತ್ತಯ್ಯ ಪೂಜಾರ್ ಬೇಸರ

# ಸಮನ್ವಯತೆ ಭಾಷಣಕ್ಕೆ ಮಾತ್ರ ಸೀಮಿತ!

ವಿಶ್ವವಾಣಿ ಸುದ್ದಿಮನೆ ಬೆಂಗಳೂರು

ಸರ್ವೋದಯ, ಸಮನ್ವಯ, ಸಮಪಾಲು, ಸಮಬಾಳು ಎಂಬ ಮಾತುಗಳು ಅಕ್ಷರಕ್ಕೆ ಅಂಟಿಕೊಂಡು, ಆಗಾಗ ಭಾಷಣಗಳಲ್ಲಿ ಮಾತ್ರ ನುಸುಳಿ ಮಾಯವಾಗುತ್ತಿವೆ ಎಂದು ಸಂಶೋಧಕ ಡಾ.ಡಿ.ಕೆ.ಚಿತ್ತಯ್ಯ ಪೂಜಾರ್ ಅಸಮಾಧಾನ ವ್ಯಕ್ತಪಡಿಸಿದ್ದಾರೆ.

ಬುದ್ಧ ಬಸವ ಗಾಂಧಿ ಸಾಂಸ್ಕೃತಿಕ ಟ್ರಸ್ಟ್ ವತಿಯಿಂದ ಶೇಷಾದ್ರಿಪುರ ಕಾಲೇಜಿನಲ್ಲಿ ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಹಾಗೂ ಗಾಂಧಿ ಶಾಂತಿ ಪ್ರತಿಷ್ಠಾನ ಆಯೋಜಿಸಿದ್ದ ರಾಜ್ಯಮಟ್ಟದ ಯುವಜನ ಸಮ್ಮೇಳನದಲ್ಲಿ ಮಾತನಾಡಿದ ಅವರು, ಸಮಾನತೆ ಎಂಬುದು ಭಾಷಣಗಳ ಬಳಕೆ ಪದವಾಗಿದೆಯೇ ಹೊರತು ಅದನ್ನು ಸಾಧಿಸುವಲ್ಲಿ ವಿಫಲವಾಗಿದ್ದೇವೆ ಎಂದು ಬೇಸರ ವ್ಯಕ್ತಪಡಿಸಿದರು.

ಬಲಿಷ್ಠವಾದ ಆರೋಗ್ಯಪೂರ್ಣ ಯುವಜನತೆಯೇ ಬಲಿಷ್ಠ ದೇಶದ ಶಕ್ತಿಯಾಗಿದೆ. ವಿದ್ಯಾವಂತರು ವಿಚಾರವಂತರಾಗಿ, ವಿಚಾರಗಳು ವಿವೇಕವನ್ನು ಬೆಳೆಸಬೇಕು. ಆದರೆ, ವಿದ್ಯಾವಂತರೇ ಈ ದೇಶದ ಅನೇಕ ದುರಂತಗಳಿಗೆ ಕಾರಣರಾಗುತ್ತಿರುವುದು ವಿಪರ್ಯಾಸ. ಸಮಾಜ ಸುಧಾರಕರು ಯುವ ಮನಸುಗಳಿಂದ ದೂರವಾಗುತ್ತಿದ್ದಾರೆ. ಆದರ್ಶಗಳು ಅಪಮೌಲ್ಯಗೊಳ್ಳುತ್ತಿವೆ. ಸಂಬಂಧಗಳು ಸಂಕಟಕ್ಕೆ ಕಾರಣವಾಗುತ್ತಿವೆ. ಮಾತುಗಳು ಮಲೀನಗೊಳ್ಳುತ್ತಿವೆ. ಸಂವಾದಗಳು ಸಂಘರ್ಷಕ್ಕೆ ಕಾರಣವಾಗುತ್ತಿವೆ ಎಂದು ವಿಷಾದಿಸಿದರು.

ಬುದ್ಧ, ಬಸವ, ವಿವೇಕಾನಂದ, ಅಂಬೇಡ್ಕರ್ ಮೊದಲಾದವರು ಜನರ ಶಾಂತಿ, ನೆಮ್ಮದಿ, ಸಹಬಾಳ್ವೆ, ಸಮಸಮಾಜದ ನಿರ್ಮಾಣಕ್ಕಾಗಿ ತ್ಯಾಗ ಮಾಡಿದರು. ಈಗ ಅವರ ಸಿದ್ಧಾಂತಗಳ ಜತೆಗೆ ಅವರ ಭಾವಚಿತ್ರಗಳು ಬಳಕೆಯಾಗುತ್ತಿರುವ ಬಗೆ ಕಂಡರೆ ಬೇಸರವಾಗುತ್ತದೆ. ಇದೆಲ್ಲ ಬದಲಾಗಿ ಅವರ ಆದರ್ಶಗಳು, ಕನಸುಗಳು, ಸಾಕಾರಗೊಳ್ಳಲು ನಾವು ಪಣತೊಡಬೇಕಿದೆ ಎಂದು ಸಲಹೆ ನೀಡಿದರು.

ಯುವಜನತೆ ರಾಜಕಾರಣಿಗಳ ಗುಲಾಮರಾಗುತ್ತಿದ್ದಾರೆ. ಡ್ರಗ್ ಮಾಫಿಯಾಗಳಿಗೆ ದಲ್ಲಾಳಿಗಳಾಗುತ್ತಿದ್ದಾರೆ. ಇದರಿಂದ ಹಳ್ಳಿ, ನಗರವೆಂಬ ಭೇದಭಾವವಿಲ್ಲದೆ ಯುವ ಸಮೂಹ ಹಾಳಾಗುತ್ತಿದೆ. ಇದರಿಂದ ಸಮಾಜದಲ್ಲಿ ಅತ್ಯಾಚಾರ, ಅನಾಚಾರ, ಕೊಲೆ, ಸುಲಿಗೆ; ಹಗಲು ದರೋಡೆ ಹೆಚ್ಚಾಗುತ್ತಿವೆ. ಸಾರ್ವಜನಿಕರು, ಅಸಹಾಯಕರು, ಅಮಾಯಕರು ಆತಂಕದಲ್ಲಿ ಬದುಕುತ್ತಿದ್ದಾರೆ. ಜಾತಿ-ಧರ್ಮ ಮೀರಿದ ಸಾಮಾಜಿಕ ಮತ್ತು ಸಾಮೂದಾಯಿಕ ಮೌಲ್ಯಗಳನ್ನು ಅಳವಡಿಸಿಕೊಳ್ಳುವ ಯುವ ಜನಾಂಗ ಬೇಕಾಗಿದ್ದು, ಪರಂಪರೆಯನ್ನು ಸರಿಯಾಗಿ ಅರ್ಥ ಮಾಡಿಕೊಳ್ಳುವುದು ಹಾಗೂ ಹಿರಿಯರ ಮೌಲ್ಯಗಳನ್ನು ಅಳವಡಿಸಿಕೊಳ್ಳಬೇಕಾದ ಅಗತ್ಯವಿದೆ ಎಂದರು.

ಕನ್ನಡ ಸಾಹಿತ್ಯ ಪರಿಷತ್ತು ಅಧ್ಯಕ್ಷ ಡಾ. ಮನು ಬಳಿಗಾರ್, ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ಡಾ. ವೂಡೇ ಪಿ. ಕೃಷ್ಣ, ಸಂಸ್ಕೃತಿ ಚಿಂತಕ ಡಾ. ಬಂಜಗೆರೆ ಜಯಪ್ರಕಾಶ್ ಇತರರು ಉಪಸ್ಥಿತರಿದ್ದರು.



ಬುದ್ಧ ಬಸವ ಗಾಂಧಿ ಸಾಂಸ್ಕೃತಿಕ ಟ್ರಸ್ಟ್ ವತಿಯಿಂದ ಶೇಷಾದ್ರಿಪುರ ಕಾಲೇಜಿನಲ್ಲಿ ಆಯೋಜಿಸಿದ್ದ ರಾಜ್ಯಮಟ್ಟದ ಯುವಜನ ಸಮ್ಮೇಳನವನ್ನು ಕನ್ನಡ ಸಾಹಿತ್ಯ ಪರಿಷತ್ತು ಅಧ್ಯಕ್ಷ ಡಾ.ಮನು ಬಳಿಗಾರ್ ಉದ್ಘಾಟಿಸಿದರು. ಸಂಶೋಧಕ ಡಾ.ಡಿ.ಕೆ.ಚಿತ್ತಯ್ಯ ಪೂಜಾರ್, ಡಾ.ವೂಡೇ ಪಿ.ಕೃಷ್ಣ, ಡಾ. ಬಂಜಗೆರೆ ಜಯಪ್ರಕಾಶ್ ತರರು ಇದ್ದರು.

> ಸೋಮಾರಿತನ, ದ್ವೇಷ, ಅಸೂಯೆ, ಅತಿಯಾದ ಭಾವುಕತೆ, ಅಸಹಿಷ್ಣುತೆಗಳಿಂದ ಮುಕ್ತರಾಗಿ ಸಹಕಾರ, ಭ್ರಾತೃತ್ವ, ಸೋದರತೆ, ಹೊಂದಾಣಿಕೆ, ತ್ಯಾಗ ಹಾಗೂ ಅಹಿಂಸೆಯಂತಹ ಮೌಲ್ಯಗಳನ್ನು ರೂಢಿಸಿಕೊಳ್ಳಬೇಕು. ಹಿರಿಯರು, ಮಕ್ಕಳು, ಸ್ತ್ರೀಯರು ಹಾಗೂ ನೆರೆಹೊರೆ ಭಾಷೆ, ಸಂಸ್ಕೃತಿ ಮತ್ತು ದೇಶವನ್ನು ಗೌರವಿಸಬೇಕು.
>
> -ಡಾ. ಡಿ.ಕೆ.ಚಿತ್ತಯ್ಯ ಪೂಜಾರ್, ಸಂಶೋಧಕ

ಉದಯವಾಣಿ

ಸೋಮವಾರ, ಮಾರ್ಚ್ 11, 2019

# ಗಾಂಧಿ, ವಿವೇಕಾನಂದ ನಿಜ ದಾರ್ಶನಿಕರು

## ಮಹನೀಯರು ಎಂದೂ ಮೌಢ್ಯ ಒಪ್ಪಲಿಲ್ಲ: ಡಾ.ಬಂಜಗೆರೆ ಜಯಪ್ರಕಾಶ್

ಬೆಂಗಳೂರು: ಮಹಾತ್ಮ ಗಾಂಧೀಜಿ ಹಾಗೂ ಸ್ವಾಮಿ ವಿವೇಕಾನಂದರು. ಭಾರತಕ್ಕೆ ನಿಜವಾದ ಹಿಂದುತ್ವವನ್ನು ನೀಡಿದ ದಾರ್ಶನಿಕರು ಎಂದು ಕನ್ನಡ ಪುಸ್ತಕ ಪ್ರಾಧಿಕಾರದ ಮಾಜಿ ಅಧ್ಯಕ್ಷ ಡಾ.ಬಂಜಗೆರೆ ಜಯಪ್ರಕಾಶ್ ಅಭಿಪ್ರಾಯಪಟ್ಟರು.

ಬುದ್ಧ ಬಸವ ಗಾಂಧಿ ಸಾಂ ಸ್ಕೃತಿಕ ಟ್ರಸ್ಟ್‌ನಿಂದ ಶೇಷಾದ್ರಿಪುರಂ ಕಾಲೇಜಿನಲ್ಲಿ ಭಾನುವಾರ ಹಮ್ಮಿಕೊಂಡಿದ್ದ ಮಹಾತ್ಮ ಗಾಂಧೀಜಿ-ವಿವೇಕಾನಂದ ಪ್ರಣೀತ ರಾಜ್ಯ ಮಟ್ಟದ ಯುವಜನ ಸಮ್ಮೇಳನದಲ್ಲಿ ಮಾತನಾಡಿದ ಅವರು, ದುಸ್ಥಿತಿಯಲ್ಲಿರುವ ಸಮಾಜದಲ್ಲಿ ಉನ್ನತ ಧರ್ಮ ಕಾಣಲು ಸಾಧ್ಯವಿಲ್ಲ ಎಂಬುದನ್ನು ಸಮಾಜ ಅರ್ಥ ಮಾಡಿಕೊಳ್ಳಬೇಕಿದೆ ಎಂದು ಹೇಳಿದರು.

**ಸತ್ಯಶೋಧನೆ ಪರಮ ಗುರಿಯಾಗಿತ್ತು:** ಭಾರತೀಯತೆ, ಹಿಂದುತ್ವದ ಪ್ರತಿನಿಧಿಗಳಾಗಿದ್ದ ಗಾಂಧೀಜಿ ಮತ್ತು ವಿವೇಕಾನಂದರು ಎಂದಿಗೂ ದೇವಸ್ಥಾನಗಳಿಗೆ ಹೋಗಲಿಲ್ಲ. ಹಾಗೂ ಮೌಢ್ಯವನ್ನು ಒಪ್ಪಲಿಲ್ಲ. ಬದಲಿಗೆ ಸತ್ಯ ಶೋಧನೆ ತಮ್ಮ ಪರಮಗುರಿ ಎಂದು ನಿಶ್ಚಯಿಸಿದ ಅವರು, ಅದೇ ಮಾರ್ಗದಲ್ಲಿ ಸಾಗಿದ್ದರು' ಎಂದರು.

"ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ಡಾ.ವೂಡೇ ಪಿ. ಕೃಷ್ಣ ಮಾತನಾಡಿ,"ಪಾಶ್ಚಿಮಾತ್ಯ ಶಿಕ್ಷಣ ಪಡೆದರೂ ಸಂಪೂರ್ಣ ಭಾರತೀಯತೆಯನ್ನು ಮೈಗೂಡಿಸಿಕೊಂಡಿದ್ದ ಗಾಂಧೀಜಿ ಹಾಗೂ ವಿವೇಕಾನಂದರ ಆದರ್ಶಗಳು ಸಮಾಜಕ್ಕೆ ಮಾರ್ಗದರ್ಶಿಯಾಗಿವೆ. ಅವರ ಚಿಂತನೆಗಳು ಕೇವಲ ಭಾರತಕ್ಕೆ ಸೀಮಿತವಾಗಿರಲಿಲ್ಲ. ಬದಲಿಗೆ ಇಡೀ ವಿಶ್ವದ ದೃಷ್ಟಿಯನ್ನು ಹೊಂದಿದ್ದವು ಎಂದು ಹೇಳಿದರು.

> ಪಾಕಿಸ್ತಾನ ಎಂದ ತಕ್ಷಣ ಎಲ್ಲರನ್ನೂ ವಿರೋಧಿಸುವುದು ಬೇಡ. ಅಲ್ಲಿಯೂ ಹಿಂದುಸ್ತಾನವನ್ನು ಪ್ರೀತಿಸುವ ಸ್ನೇಹಜೀವಿಗಳಿದ್ದಾರೆ. ಮಾನವೀಯತೆ ಯುದ್ಧಕ್ಕಿಂತ ದೊಡ್ಡದು.
>
> ಡಾ.ಮನು ಬಳಿಗಾರ್, ಕಸಾಪ ...ಧ್ಯಕ್ಷ



**ಸ್ವಯಂ ಉದ್ಯೋಗಿಗಳಾಗಿ:** ಸಮ್ಮೇಳನಾಧ್ಯಕ್ಷ ಡಾ.ಡಿ.ಕೆ. ಚಿತ್ತಯ್ಯ ಪೂಜಾರ್ ಮಾತನಾಡಿ, ಯಂತ್ರಗಳ ಅತಿಯಾದ ಅವಲಂಬನೆ ಹಾಗೂ ಸರ್ಕಾರವನ್ನು ನೆಚ್ಚಿ ಉದ್ಯೋಗದ ನಿರೀಕ್ಷೆಯಲ್ಲಿರುವ ಬದಲಿಗೆ ಸ್ವಯಂ ಉದ್ಯೋಗಿಗಳಾಗಲು ಯುವಕರು ಮುಂದಾಗಬೇಕು ಎಂದು ಕರೆ ನೀಡಿದರು.

ಸಮ್ಮೇಳನದಲ್ಲಿ ಬೆಳಗ್ಗೆಯಿಂದ ಸಂಜೆವರೆಗೆ ವಿವಿಧ ಗೋಷ್ಠಿಗಳು ನಡೆದವು. ಈ ವೇಳೆ ಕರ್ನಾಟಕ ಸಂಸ್ಕೃತ ವಿವಿ ವಿಶ್ರಾಂತ ಕುಲಪತಿ ಡಾ.ಮಲ್ಲೇಪುರಂ ಜಿ. ವೆಂಕಟೇಶ್, ತುಮಕೂರು ವಿವಿ ಪ್ರಾಧ್ಯಾಪಕ ಡಾ.ಶಿವಣ್ಣ ಬೆಳವಾಡಿ, ಗಾಂಧಿ ಸ್ಮಾರಕ ನಿಧಿ ಗೌರವ ಕಾರ್ಯದರ್ಶಿ ಇಂದಿರಾ ಕೃಷ್ಣಪ್ಪ, ಬುದ್ಧ ಬಸವ ಗಾಂಧಿ ಸಾಂಸ್ಕೃತಿಕ ಟ್ರಸ್ಟ್‌ನ ಕಾರ್ಯದರ್ಶಿ ಸಿ.ಹೇಮಾವತಿ ಸಿಸಿರಾ ಉಪಸ್ಥಿತರಿದ್ದರು.

ಸಂಯುಕ್ತ ಕರ್ನಾಟಕ
ಸೋಮವಾರ 11 । ಮಾರ್ಚ್ । 2019
ಕನ್ನಡವೇ ಸತ್ಯ ಕನ್ನಡವೇ ನಿತ್ಯ



ಬುದ್ಧ ಬಸವ ಗಾಂಧಿ ಸಾಂಸ್ಕೃತಿಕ ಟ್ರಸ್ಟ್ ಹಾಗೂ ಕರ್ನಾಟಕ ಗಾಂಧೀ ಸ್ಮಾರಕ ನಿಧಿ ಆಯೋಜಿಸಿದ್ದ 'ರಾಜ್ಯ ಮಟ್ಟದ ಯುವಜನ ಸಮ್ಮೇಳನ'ವನ್ನು ಕಸಾಪ ಅಧ್ಯಕ್ಷ ಡಾ. ಮನು ಬಳಿಗಾರ್ ಉದ್ಘಾಟಿಸಿದರು. ಈ ಸಂದರ್ಭದಲ್ಲಿ ಗಾಂಧೀ ಸ್ಮಾರಕ ನಿಧಿ ಅಧ್ಯಕ್ಷ ಡಾ. ವೂಡೇ ಪಿ.ಕೃಷ್ಣ, ಸಾಹಿತಿ ಬಂಜಗೆರೆ ಜಯಪ್ರಕಾಶ್, ಸಹಿತಿ ಡಾ. ಡಿ.ಕೆ.ಚಿತ್ತಯ್ಯ ಪೂಜಾರ್ ಸೇರಿದಂತೆ ಮತ್ತಿತರರಿದ್ದರು.

ಹೊಸ ದಿಗಂತ

ಸೋಮವಾರ
11 ಮಾರ್ಚ್ 2019

# ಸದೃಢ ದೇಶಕ್ಕೆ ಯುವಜನತೆಯೇ ಶಕ್ತಿ



**ಬೆಂಗಳೂರು:** ಬಲಿಷ್ಠ ದೇಶಕ್ಕೆ ಆರೋಗ್ಯ ಪೂರ್ಣ ಯುವಜನತೆಯೇ ಶಕ್ತಿ. ಆದರೆ, ಇಂದು ವಿದ್ಯಾವಂತರೇ ನಮ್ಮ ದೇಶದ ಅನೇಕ ದುರಂತಗಳಿಗೆ ಕಾರಣರಾಗುತ್ತಿರುವುದು ವಿಪರ್ಯಾಸ ಎಂದು ಸಂಶೋಧಕ ಡಾ. ಡಿ.ಕೆ. ಚಿತ್ತಯ್ಯ ಪೂಜಾರ್ ಅಸಮಾಧಾನ ವ್ಯಕ್ತಪಡಿಸಿದರು.

ಭಾನುವಾರ ನಗರದ ಶೇಷಾದ್ರಿಪುರ ಕಾಲೇಜಿನಲ್ಲಿ ಬುದ್ಧ ಬಸವ ಗಾಂಧಿ ಸಾಂಸ್ಕೃತಿಕ ಟ್ರಸ್ಟ್, ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಹಾಗೂ ಗಾಂಧಿ ಶಾಂತಿ ಪ್ರತಿಷ್ಠಾನ ಆಯೋಜಿಸಿದ್ದ ರಾಜ್ಯಮಟ್ಟದ ಯುವಜನ ಸಮ್ಮೇಳದ ಸರ್ವಾಧ್ಯಕ್ಷತೆ ವಹಿಸಿ ಮಾತನಾಡಿದ ಅವರು, ಸರ್ವೋದಯ, ಸಮನ್ವಯ ಮಾತುಗಳು ಕೇವಲ ಅಕ್ಷರಕ್ಕೆ ಅಂಟಿಕೊಂಡಿದ್ದು, ಸಭೆ ಸಮಾರಂಭಗಳಲ್ಲಿಯೇ ನುಸುಳಿ ಮಾಯವಾಗುತ್ತಿದೆ. ಸಮಾಜ ಸುಧಾರಕರು ಯುವ ಮನಸ್ಸುಗಳಿಂದ ದೂರವಾಗುತ್ತಿದ್ದಾರೆ. ಆದರ್ಶಗಳು ಅಪಮೌಲ್ಯಗೊಳ್ಳುತ್ತಿವೆ. ಸಂಬಂಧಗಳು ಸಂಕಟಕ್ಕೆ ಕಾರಣವಾಗುತ್ತಿವೆ. ಸಂವಾದಗಳು ಸಂಘರ್ಷಕ್ಕೆ ಕಾರಣವಾಗುತ್ತಿವೆ ಎಂದು ವಿಷಾದ ವ್ಯಕ್ತಪಡಿಸಿದರು.

ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷ ಮನುಬಳಿಗಾರ್ ಮಾತನಾಡಿ, ನಿರಂತರ ಓದಿನಿಂದ ಯುವಜನರು ತಮ್ಮಲ್ಲಿ ಹುದುಗಿರುವ ಪರಿಪಕ್ವತೆಯನ್ನು ಹೊರಹಾಕಿ, ಸಮಾಜಕ್ಕೆ ಉತ್ತಮ ಚಿಂತನೆಗಳನ್ನು ಬಿತ್ತರಿಸಬೇಕು ಎಂದು ಸಲಹೆ ನೀಡಿದರು.

ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ಡಾ. ವೂಡೇ ಪಿ. ಕೃಷ್ಣ, ಸಂಸ್ಕೃತಿ ಚಿಂತಕ ಡಾ. ಬಂಜಗೆರೆ ಜಯಪ್ರಕಾಶ್, ಕನ್ನಡ ಸಂಘಟನೆಗಳ ಒಕ್ಕೂಟ ಅಧ್ಯಕ್ಷ ಎ. ತಿಮ್ಮಯ್ಯ, ಬುದ್ಧ ಬಸವ ಗಾಂಧಿ ಸಾಂಸ್ಕೃತಿಕ ಟ್ರಸ್ಟ್ ಅಧ್ಯಕ್ಷ ಎಸ್. ರಾಮಲಿಂಗೇಶ್ವರ, ಮಹಿಳಾ ಹೋರಾಟಗಾರ್ತಿ ಲೀಲಾಮೇರಿ, ಅಖಿಲ ಭಾರತ ಮಾನವ ಹಕ್ಕುಗಳ ಸಂಘಟನೆಯ ರಾಜ್ಯ ಉಪಾಧ್ಯಕ್ಷ ಡಾ.ಬಿ.ಎಲ್. ಮಂಜುನಾಥ್, ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಕಾರ್ಯದರ್ಶಿ ಇಂದಿರಾ ಕೃಷ್ಣಪ್ಪ ಮತ್ತಿತರರು ಉಪಸ್ಥಿತರಿದ್ದರು. ಈ ವೇಳೆ ಡಾ. ಡಿ.ಕೆ. ಚಿತ್ತಯ್ಯ ಪೂಜಾರ್ ಅವರ ಘುಮ್ಮಡಿ ಹೊಟ್ಟಣ್ಣ ನಾಯಕ ಕೃತಿ ಲೋಕಾರ್ಪಣೆಗೊಳಿಸಲಾಯಿತು.



ಮಹಾತ್ಮ ಗಾಂಧಿ-ವಿವೇಕಾನಂದ ಪ್ರಣೀತ ರಾಜ್ಯ ಮಟ್ಟದ ಯುವ ಜನ ಸಮ್ಮೇಳನವನ್ನು ಕಸಾಪ ರಾಜ್ಯಾಧ್ಯಕ್ಷ ಮನು ಬಳಿಗಾರ್ ಉದ್ಘಾಟಿಸಿದರು. ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ವೂಡೇ.ಪಿ.ಕೃಷ್ಣ, ಬಂಡಾಯ ಸಾಹಿತಿ ಬಂಜಗೆರೆ ಜಯಪ್ರಕಾಶ್, ಪ್ರಾಧ್ಯಾಪಕ ಚಿತ್ತಯ್ಯ ಪೂಜಾರ್ ಮತ್ತಿತರರು ಹಾಜರಿದ್ದರು.

ಕರ್ನಾಟಕ
ಭಾನುವಾರ,10 ಮಾರ್ಚ್ 2019, ಬೆಂಗಳೂರು

# 'ಸೌಂದರ್ಯ ಲಹರಿ' ಪುಸ್ತಕ ಬಿಡುಗಡೆ



ಕೌಂಡಿನ್ಯ ರಚಿತ 'ಸೌಂದರ್ಯ ಲಹರಿ' ಕಾದಂಬರಿ ಬಿಡುಗಡೆ ಕಾರ್ಯಕ್ರಮದಲ್ಲಿ ವೂಡೇ ಪಿ. ಕೃಷ್ಣ, ಡಾ ಪ್ರಕಾಶ್ ಎನ್ ನಗರಗುಂದ ಮತ್ತಿತರರು ಇದ್ದರು.

**ವಿಕ ಸುದ್ದಿಲೋಕ** ಬೆಂಗಳೂರು

ಸೌಂದರ್ಯ ಲಹರಿಯಂಥ ಪುಸ್ತಕಗಳು ಮನಸ್ಸನ್ನು ಅರಳಿಸುತ್ತವೆ ಎಂದು ಕರ್ನಾಟಕ ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷ ಡಾ. ವೂಡೇ ಪಿ. ಕೃಷ್ಣ ಅಭಿಪ್ರಾಯಪಟ್ಟರು.

ಶೇಷಾದ್ರಿಪುರಂ ಸಮೂಹ ಶಿಕ್ಷಣ ಸಂಸ್ಥೆಯ ಸಂಜೆ ಪದವಿ ಕಾಲೇಜಿನ ಕನ್ನಡ ಸಾಹಿತ್ಯ ವೇದಿಕೆಯು ಶೇಷಾದ್ರಿಪುರಂನಲ್ಲಿ ಆಯೋಜಿಸಿದ್ದ ಸಮಾರಂಭದಲ್ಲಿ ಖ್ಯಾತ ಕಾದಂಬರಿಕಾರ ಕೌಂಡಿನ್ಯ ರಚಿತ 'ಸೌಂದರ್ಯ ಲಹರಿ' ಕಾದಂಬರಿ ಬಿಡುಗಡೆ ಮಾಡಿ ಶನಿವಾರ ಮಾತನಾಡಿದರು.

''ಬರವಣಿಗೆಗಳಿಂದ ಮನಸ್ಸುಗಳನ್ನು ಕಟ್ಟುವಂತಹ ಕೆಲಸವಾಗಬೇಕು. ಇದರಿಂದ ಸಮಾಜ ಸನ್ಮಾರ್ಗದಲ್ಲಿ ಸಾಗುತ್ತದೆ,'' ಎಂದರು.

ಕಾದಂಬರಿಕಾರ ಕೌಂಡಿನ್ಯ ಮಾತನಾಡಿ ''ಇದುವರೆಗೆ ನನ್ನ 150 ಕಾದಂಬರಿಗಳು ಬಿಡುಗಡೆಯಾಗಿವೆ. ಆದರೆ ವಿದ್ಯಾಸಂಸ್ಥೆಯಲ್ಲಿ ಕಾದಂಬರಿ ಬಿಡುಗಡೆಯಾಗುತ್ತಿರುವುದು ಇದೇ ಮೊದಲು,'' ಎಂದರು.

ಸಾಹಿತಿ ಡಾ. ಪ್ರಕಾಶ ಎನ್. ನರಗುಂದ, ಸಿನಿಮಾ ನಿರ್ಮಾಪಕ ಅನಿಲ್ ನಾಯ್ಡು, ಚಲನಚಿತ್ರ ನಿರ್ದೇಶಕ ಕೆ.ಟಿ. ಸತೀಶ್ ರೆಡ್ಡಿ, ಪ್ರಾಚಾರ್ಯರಾದ ಪ್ರೊ. ಎನ್.ಎಸ್. ಸತೀಶ್ ಮತ್ತಿತರರು ಉಪಸ್ಥಿತರಿದ್ದರು.

ಕನ್ನಡಪ್ರಭ
ಬುಧವಾರ 10.4.2019

■ ಶೇಷಾದ್ರಿಪುರ ವಾಣಿಜ್ಯ ಮತ್ತು ನಿರ್ವಹಣಾ ಶಿಕ್ಷಣ ಸಂಸ್ಥೆ: ಕಾಲೇಜು ವಾರ್ಷಿಕೋತ್ಸವ, ಅತಿಥಿಗಳು- ಚಲನಚಿತ್ರ ನಿರ್ದೇಶಕ ಸಂತೋಷ್ ಆನಂದರಾಮ್, ಗೌರವ ಅತಿಥಿ- ಶೇಷಾದ್ರಿಪುರ ಶಿಕ್ಷಣ ದತ್ತಿ ಪ್ರಧಾನ ಕಾರ್ಯದರ್ಶಿ ಡಾ.ವೂಡೇ ಪಿ.ಕೃಷ್ಣ, ಅಧ್ಯಕ್ಷತೆ- ಶೇಷಾದ್ರಿಪುರ ಶಿಕ್ಷಣ ದತ್ತಿ ಅಧ್ಯಕ್ಷ ಎನ್.ಆರ್.ಪಂಡಿತಾರಾಧ್ಯ, ಸ್ಥಳ- ಕುವೆಂಪು ರಂಗಮಂದಿರ, ಶೇಷಾದ್ರಿಪುರ ಕಾಲೇಜು, ಬೆಳಗ್ಗೆ 9.

ಕನ್ನಡಪ್ರಭ

ಬುಧವಾರ 10.4.2019



■ ಶೇಷಾದ್ರಿಪುರಂ ಸಂಜೆ ಪದವಿ ಕಾಲೇಜು: ಸಂಧ್ಯಾ ಕಲರವ 48ನೇ ವಾರ್ಷಿಕೋತ್ಸವ. ಅತಿಥಿಗಳು- ಸಂಗೀತ ನಿರ್ದೇಶಕ ಡಾ.ಹಂಸಲೇಖ, ಅಧ್ಯಕ್ಷತೆ- ಶೇಷಾದ್ರಿಪುರಂ ಶಿಕ್ಷಣ ದತ್ತಿ ಅಧ್ಯಕ್ಷ ಎನ್.ಆರ್.ಪಂಡಿತಾರಾಧ್ಯ, ವಿಶೇಷ ಆಹ್ವಾನಿತರು- ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ಡಾ.ವೂಡೇ ಪಿ.ಕೃಷ್ಣ, ಸ್ಥಳ- ಶೇಷಾದ್ರಿಪುರಂ ಶಿಕ್ಷಣ ದತ್ತಿ ಆವರಣ, ಶೇಷಾದ್ರಿಪುರಂ. ಸಂಜೆ 5.

ಪ್ರಜಾವಾಣಿ ಶನಿವಾರ ಮಾರ್ಚ್ 9, 2019

# 'ಸೌಂದರ್ಯ ಲಹರಿ' ಪುಸ್ತಕ ಬಿಡುಗಡೆ

ಬೆಂಗಳೂರು: ಶೇಷಾದ್ರಿಪುರ ಸಮೂಹ ಶಿಕ್ಷಣ ಸಂಸ್ಥೆಯ ಕನ್ನಡ ಸಾಹಿತ್ಯ ವೇದಿಕೆಯಿಂದ ಆಯೋಜಿಸಿದ್ದ ಕಾರ್ಯಕ್ರಮದಲ್ಲಿ ಕಾದಂಬರಿಕಾರ ಕೌಂಡಿನ್ಯ ಅವರ 'ಸೌಂದರ್ಯ ಲಹರಿ' ಕೃತಿಯನ್ನು ಕರ್ನಾಟಕ ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷ ವೂಡೇ ಪಿ.ಕೃಷ್ಣ ಬಿಡುಗಡೆ ಮಾಡಿದರು.

'ಬರವಣಿಗೆಯಿಂದ ಮನಸ್ಸುಗಳನ್ನು ಅರಳಿಸುವಂತಹ ಕೆಲಸ ಆಗಬೇಕು. 'ಸೌಂದರ್ಯ ಲಹರಿ' ಕಾದಂಬರಿ ಆ ನಿಟ್ಟಿನಲ್ಲಿ ಯಶಸ್ವಿಯಾಗಿದೆ' ಎಂದು ಅವರು ಹೇಳಿದರು. ಕೃತಿ ರಚಿಸಿದ ಕೌಂಡಿನ್ಯ, 'ಅತ್ತೆ-ಸೊಸೆ-ಮಗ ಇವರ ನಡುವಿನ ಕೌಟುಂಬಿಕ ಬಾಂಧವ್ಯವೇ ಕಾದಂಬರಿಯ ಕಥಾವಸ್ತು' ಎಂದು ಹೇಳಿದರು. 'ಗಾಂಧೀಜಿಯವರ ಆಧ್ಯಾತ್ಮಿಕ ಚಿಂತನೆಗಳನ್ನು ಅಧ್ಯಯನ ಮಾಡಿ' ಎಂದು ವಿದ್ಯಾರ್ಥಿಗಳಿಗೆ ಅವರು ಸಲಹೆ ನೀಡಿದರು.

ಸಾಹಿತಿ ಡಾ.ಪ್ರಕಾಶ ಎನ್.ನರಗುಂದ, ನಿರ್ಮಾಪಕ ಅನಿಲ್ ನಾಯ್ಡು, ನಿರ್ದೇಶಕ ಕೆ.ಟಿ.ಸತೀಶ್ ರೆಡ್ಡಿ, ಕಾಲೇಜಿನ ಪ್ರಾಚಾರ್ಯರು ಪ್ರೊ.ಎನ್.ಎಸ್. ಸತೀಶ್ ಹಾಜರಿದ್ದರು.

ನಂ. 1 ಕನ್ನಡ ದಿನಪತ್ರಿಕೆ

VIJAYAVANI BENGALURU
ಗುರುವಾರ 7 ಮಾರ್ಚ್ 2019
7 MARCH 2019

ಕೃಷಿ ಸಚಿವ ಶಿವಶಂಕರ್ ರೆಡ್ಡಿ ಹೇಳಿಕೆ I ರೈತ ಕೇಂದ್ರಿತ ನೀರಾವರಿ ಕಾರ್ಯಾಗಾರ ಉದ್ಘಾಟನೆ

# ಸೂಕ್ಷ್ಮ ನೀರಾವರಿಗೆ ಹೆಚ್ಚಿನ ಆದ್ಯತೆ

◻ ವಿಜಯವಾಣಿ ಸುದ್ದಿಜಾಲ ಬೆಂಗಳೂರು

ಜಲಸಂರಕ್ಷಣೆಗೆ ಒತ್ತು ನೀಡುವ ದೃಷ್ಟಿಯಿಂದ ರಾಜ್ಯದಲ್ಲಿ ನೀರಾವರಿ ಪ್ರದೇಶಗಳನ್ನು ಸೂಕ್ಷ್ಮ ನೀರಾವರಿಗೆ ಪರಿವರ್ತಿಸಲಾಗುವುದು ಎಂದು ಕೃಷಿ ಸಚಿವ ಎನ್.ಎಚ್. ಶಿವಶಂಕರ ರೆಡ್ಡಿ ತಿಳಿಸಿದ್ದಾರೆ.

» ನೀರಿನ ಸದ್ಬಳಕೆ ಬಗ್ಗೆ ರೈತರಿಗೆ ಜಾಗೃತಿ

ಎಫ್‌ಕೆಸಿಸಿಐ ಸಭಾಂಗಣದಲ್ಲಿ ಬುಧವಾರ ಇಂಡಿಯನ್ ಟೆಕ್ನಾಲಜಿ ಕಾಂಗ್ರೆಸ್ ಅಸೋಸಿಯೇಷನ್ ಹಮ್ಮಿಕೊಂಡಿದ್ದ 'ರೈತ ಕೇಂದ್ರಿತ ನೀರಾವರಿ' ಕಾರ್ಯಾಗಾರ ಉದ್ಘಾಟಿಸಿ ಮಾತನಾಡಿದರು. ರಾಜ್ಯದಲ್ಲಿ ರೈತರು ಅಗತ್ಯಕ್ಕಿಂತ ಹೆಚ್ಚಿನ ನೀರು ಬಳಸುತ್ತಿದ್ದಾರೆ. ಈ ಬಗ್ಗೆ ಜಾಗೃತಿ ಮೂಡಿಸಬೇಕು ಎಂದರು.

ನೀರಾವರಿ ಉತ್ಕೃಷ್ಟ ಕೇಂದ್ರವನ್ನು ಸರ್ಕಾರ ಸ್ಥಾಪಿಸುವುದರ ಮೂಲಕ ಜಲ ಸಂರಕ್ಷಣೆಗೆ ಆದ್ಯತೆ ನೀಡಬೇಕು ಎಂದು ತೋಟಗಾರಿಕೆ ವಿಶ್ವವಿದ್ಯಾಲಯದ ನಿವೃತ್ತ ಕುಲಪತಿ ಡಾ. ಡಿ.ಎಲ್. ಮಹೇಶ್ವರ್ ಹೇಳಿದರು. ಎಫ್‌ಕೆಸಿಸಿಐ ಅಧ್ಯಕ್ಷ ಸುಧಾಕರ್ ಎಸ್. ಶೆಟ್ಟಿ, ಇಂಡಿಯನ್ ಟೆಕ್ನಾಲಜಿ ಕಾಂಗ್ರೆಸ್ ಅಸೋಸಿಯೇಷನ್ ಅಧ್ಯಕ್ಷ ಡಾ. ಎಲ್. ವಿ. ಮುರಳಿಕೃಷ್ಣ ರೆಡ್ಡಿ, ಕೆವೈ ಪೈಪ್ಸ್‌ನ ಮುಖ್ಯ ಅಧಿಕಾರಿ ಡಾ. ಶ್ರೀನಿವಾಸ ಲಿಂಗಿರೆಡ್ಡಿ, ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ಡಾ. ವೂಡೇ ಪಿ.ಕೃಷ್ಣ ಇತರರಿದ್ದರು.



ಎಫ್‌ಕೆಸಿಸಿಐ ಸಭಾಂಗಣದಲ್ಲಿ ಹಮ್ಮಿಕೊಂಡಿದ್ದ ಕಾರ್ಯಾಗಾರವನ್ನು ಕೃಷಿ ಸಚಿವ ಎನ್.ಎಚ್. ಶಿವಶಂಕರ ರೆಡ್ಡಿ ಉದ್ಘಾಟಿಸಿದರು. ಡಾ. ಡಿ.ಎಲ್. ಮಹೇಶ್ವರ್, ಸುಧಾಕರ್ ಎಸ್. ಶೆಟ್ಟಿ, ಡಾ. ವೂಡೇ ಪಿ. ಕೃಷ್ಣ ಮತ್ತಿತರರಿದ್ದರು.

ಸಂಯುಕ್ತ ಕರ್ನಾಟಕ ಬೆಂಗಳೂರು | 07 ಮಾರ್ಚ್ | 2019 | ಗುರುವಾರ

# ‘ಉ.ಕದವರಿಗೆ ನೀರಿನ ಬೆಲೆ ಗೊತ್ತಿಲ್ಲ’

ಸಂ ಕ ಸಮಾಚಾರ ಬೆಂಗಳೂರು

ಉತ್ತರ ಕರ್ನಾಟಕದವರಿಗೆ ನೀರಿನ ಬೆಲೆ ಗೊತ್ತಿಲ್ಲ ಎಂದು ಸಚಿವ ಡಿ.ಕೆ. ಶಿವಕುಮಾರ್ ಹೇಳಿದರು.

ಎಫ್‌ಕೆಸಿಸಿಐನಲ್ಲಿ ಆಯೋಜಿಸಿದ್ದ ರೈತ ಕೇಂದ್ರಿತ ನೀರಾವರಿ ಕಾರ್ಯಾಗಾರದಲ್ಲಿ ಮಾತನಾಡಿ, ರಾಜ್ಯದಲ್ಲಿ ಜಲ ಮೂಲಗಳೆಲ್ಲ ಬತ್ತಿಹೋಗುತ್ತಿವೆ. ಜನರು ನೀರಿನ ಮೌಲ್ಯ ಅರಿತು ಬಳಕೆ ಮಾಡುತ್ತಿಲ್ಲ. ಅದರಲ್ಲೂ ಉತ್ತರ ಕರ್ನಾಟಕದ ಕೆಲ ಜಿಲ್ಲೆಯವರಿಗೆ ನೀರಿನ ಬೆಲೆ ಗೊತ್ತಿಲ್ಲ. ವ್ಯವಸಾಯದಲ್ಲಿ ಯಾವುದೇ ನಿಯಮವಿಲ್ಲದೇ ಮನಬಂದಂತೆ ನೀರನ್ನು ಬಳಕೆ ಮಾಡುತ್ತಾರೆ ಎಂದು ಹರಿಹಾಯ್ದರು.

ಸರ್ಕಾರ ರೈತರಿಗೆ ಅನೇಕ ಯೋಜನೆಗಳನ್ನು ರೂಪಿಸಿದ್ದರೂ ಕೃಷಿಕರು ಮಾತ್ರ ಸ್ವಾವಲಂಬನೆ ಜೀವನ ನಡೆಸಲಾಗುತ್ತಿಲ್ಲ ಎಂಬುದು ಪ್ರಶ್ನೆಯಾಗಿದೆ. ರೈತರು ಇರುವ ಜಮೀನು ಮಾರಿ ನಗರಗಳಲ್ಲಿ ಕೂಲಿ ಮಾಡುತ್ತಿದ್ದಾರೆ.

ಕೃಷಿಯಲ್ಲಿ ಸುಧಾರಿತ ತಂತ್ರಜ್ಞಾನ ಬಳಕೆಯ ಕುರಿತು ರೈತರಿಗೆ ತಿಳುವಳಿಕೆ ಇಲ್ಲದಾಗಿದೆ. ನಗರದ ನಾಗರಿಕರಿಗೆ ನೀಡುವ ಗೌರವವನ್ನು ರೈತರಿಗೆ ನೀಡುತ್ತಿಲ್ಲ. ಈ ಕುರಿತು ಸರ್ಕಾರ ಚಿಂತನೆಯಾಗಬೇಕು ಎಂದು ತಿಳಿಸಿದರು

ರಾಜ್ಯದಲ್ಲಿ ಇಂತಹ ನೀರಾವರಿ ಕ್ರಮಗಳು ಮುಂದುವರೆದರೆ ಭವಿಷ್ಯದಲ್ಲಿ ನೀರಿಗಾಗಿ ಯುದ್ಧ ನಡೆಯುವ ಪ್ರಸಂಗವನ್ನು ಎದುರಿಸಬೇಕಾಗುತ್ತದೆ. ಈ ಹಿನ್ನೆಲೆಯಲ್ಲಿ ರೈತರು ಕೃಷಿಯಲ್ಲಿ ಹನಿ ಮತ್ತು ಸೂಕ್ಷ್ಮ ನೀರಾವರಿ ಪದ್ಧತಿಗಳನ್ನು ಅಳವಡಿಸಿಕೊಂಡು ನೀರು ಪೋಲಾಗುವುದನ್ನು ತಡೆಯಬೇಕು. ಗ್ರಾಮಗಳಲ್ಲಿಯೇ ಮೂಲಸೌಕರ್ಯ ಒದಗಿಸುವ ಹಾಗೂ ತಂತ್ರಜ್ಞಾನದ ಅರಿವು ಮೂಡಿಸುವ ಮೂಲಕ ಕೃಷಿ ಒಳಗೊಂಡು ಸಮಗ್ರ ಕ್ಷೇತ್ರಗಳ ಅಭಿವೃದ್ಧಿಯಾಗಬೇಕು ಎಂದು ಹೇಳಿದರು.



ಎಫ್‌ಕೆಸಿಸಿಐನಲ್ಲಿ ಆಯೋಜಿಸಿದ್ದ ರೈತ ಕೇಂದ್ರಿತ ನೀರಾವರಿ ಕಾರ್ಯಾಗಾರವನ್ನು ಸಚಿವ ಶಿವಶಂಕರ ರೆಡ್ಡಿ ಉದ್ಘಾಟಿಸಿದರು. ಎಫ್‌ಕೆಸಿಸಿಐ ಅಧ್ಯಕ್ಷ ಸುಧಾಕರ ಶೆಟ್ಟಿ, ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ವೊಡೇ ಪಿ. ಕೃಷ್ಣ, ಡಾ. ಶ್ರೀನಿವಾಸ ಲಿಂಗರೆಡ್ಡಿ ಮತ್ತಿತರರಿದ್ದರು.

ಸಚಿವ ಶಿವಶಂಕರ ರೆಡ್ಡಿ ಮಾತನಾಡಿ, ಪ್ರತಿ ನೀರಿನ ಹನಿಗೂ ಮೌಲ್ಯ ಬರುವಂತೆ ನೀತಿ ರೂಪಿಸಬೇಕು. ಮಳೆ ನೀರನ್ನು ತಡೆದು ಅಂತರ್ಜಲ ಹೆಚ್ಚಿಸುವ ಕ್ರಮಗಳನ್ನು ಎಲ್ಲರೂ ಅನುಸರಿಸಬೇಕು. ಪ್ರಸ್ತುತ ಇರುವ ಜಲವನ್ನು ಸಂರಕ್ಷಿಸಿ ಹಿತಮಿತವಾಗಿ ಬಳಕೆ ಮಾಡಬೇಕು. ರೈತರು ವೈಜ್ಞಾನಿಕ ಕೃಷಿ ಪದ್ಧತಿಗಳನ್ನು ಅಳವಡಿಸಿಕೊಂಡು ಸ್ವಾವಲಂಬಿಗಳಾಗಿ ಬದುಕಬೇಕು ಎಂದು ಹೇಳಿದರು.

ಎಫ್‌ಕೆಸಿಸಿಐ ಅಧ್ಯಕ್ಷ ಸುಧಾಕರ ಶೆಟ್ಟಿ, ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ವೊಡೇ ಪಿ. ಕೃಷ್ಣ, ಐಟಿಸಿ–ಎನ ಡಾ.ಡಿ.ಎಲ್. ಮಹೇಶ್ವರ, ಡಾ. ಶ್ರೀನಿವಾಸ ಲಿಂಗರೆಡ್ಡಿ ಮತ್ತಿತರರಿದ್ದರು.

ಸುವರ್ಣ ಟೈಮ್ಸ್ ಆಫ್ ಕರ್ನಾಟಕ

ಗುರುವಾರ, 7 ಮಾರ್ಚ್ 2019

# ನೀರಾವರಿ ಹೆಚ್ಚಿರುವಲ್ಲೇ ರೈತರ ಆತ್ಮಹತ್ಯೆ ಅಧಿಕ!

## 'ಭವಿಷ್ಯದಲ್ಲಿ ರೈತ ಕೇಂದ್ರಿತ ನೀರಾವರಿ ಅಭಿವೃದ್ಧಿ' ಕುರಿತ 2 ದಿನಗಳ ಕಾರ್ಯಾಗಾರ ಉದ್ಘಾಟಿಸಿದ ಡಿಕೆಶಿ

ಬೆಂಗಳೂರು: ಕಡಿಮೆ ನೀರಾವರಿ ಪ್ರದೇಶದ ರೈತರಿಗಿಂತ ಹೆಚ್ಚು ನೀರಾವರಿ ಸೌಲಭ್ಯವಿರುವ ಪ್ರದೇಶದ ರೈತರೇ ಆತ್ಮಹತ್ಯೆಗೆ ಶರಣಾಗುತ್ತಿರುವುದು ಆತಂಕಕಾರಿ ಸಂಗತಿ ಎಂದು ಜಲಸಂಪನ್ಮೂಲ ಸಚಿವ ಡಿ.ಕೆ. ಶಿವಕುಮಾರ್ ವಿಷಾದಿಸಿದರು.

ಕೋಲಾರ, ಚಿಕ್ಕಬಳ್ಳಾಪುರ ಭಾಗಗಳಲ್ಲಿ ನೀರಿನ ಪ್ರಮಾಣ ಕಡಿಮೆಯಿದ್ದರೂ ರೈತರು ಕೃಷಿ ಚಟುವಟಿಕೆಗಳಲ್ಲಿ ಗಣನೀಯ ಸಾಧನೆ ಮಾಡಿದ್ದಾರೆ. ಮಂಡ್ಯ, ಹಾಸನ ಮೈಸೂರು ಭಾಗದಲ್ಲಿ ನೀರಾವರಿ ಸೌಲಭ್ಯ ಅಗತ್ಯಕ್ಕಿಂತ ಹೆಚ್ಚಿದೆಯಾದರೂ ಅಲ್ಲಿನ ರೈತರು ಕೃಷಿ ಚಟುವಟಿಕೆಗಳಲ್ಲಿ ನಿರೀಕ್ಷಿತ ಸಾಧನೆ ತೋರದೆ ಆತ್ಮಹತ್ಯೆಗೆ ಮುಂದಾಗುವುದು ಸರಿಯಲ್ಲ ಎಂದರು.

ನಗರದಲ್ಲಿ ಬುಧವಾರ ಕೆಜಿ ರಸ್ತೆಯ ಎಫ್‌ಕೆಸಿಸಿಐ ಸಭಾಂಗಣದಲ್ಲಿ ಇಂಡಿಯನ್ ಟೆಕ್ನಾಲಜಿ ಕಾಂಗ್ರೆಸ್ ಅಸೋಸಿಯೇಷನ್, ಸಾಯಿ ಸಂಕೇತ್ ಹಾಗೂ ಅಗ್ರಿಟೆಕ್ ಸಂಯುಕ್ತ ಆಶ್ರಯದಲ್ಲಿ ಆಯೋಜಿಸಿರುವ 'ಭವಿಷ್ಯದಲ್ಲಿ ರೈತ ಕೇಂದ್ರಿತ ನೀರಾವರಿ ಅಭಿವೃದ್ಧಿ' ಕುರಿತ 2 ದಿನಗಳ ಕಾರ್ಯಾಗಾರ ಉದ್ಘಾಟಿಸಿ ಅವರು ಮಾತನಾಡಿ, ಕೃಷಿ ಚಟುವಟಿಕೆಗಳಿಗೆ ನೀರು ಹೆಚ್ಚಿರುವ ಪ್ರದೇಶಗಳಲ್ಲಿಯೇ ರೈತರು ಆತ್ಮಹತ್ಯೆಗೆ ಮುಂದಾಗುತ್ತಿರುವುದು ದುರದೃಷ್ಟಕರ ಎಂದರು.

ಕರ್ನಾಟಕದಲ್ಲಿ ಅತಿ ಹೆಚ್ಚು ಕೃಷಿ ಭೂಮಿ ಇದೆ. ಹೀಗಾಗಿ, ನೀರು ಬಳಕೆ ಮತ್ತು ಆಧುನಿಕ ಕೃಷಿ ಅಳವಡಿಕೆಗೆ ಮುಂದಾಗಬೇಕು ಎಂದ ಅವರು, ಭೂಮಿ ಫಲವತ್ತತೆ ಬಗ್ಗೆಯೂ, ನಮಗೆ ಮಾಹಿತಿ ದೊರೆಯಬೇಕು. ಈ ನಿಟ್ಟಿನಲ್ಲಿ ಸಂಶೋಧನಾ ಅಗತ್ಯತೆ ಇದೆ ಎಂದು ನುಡಿದರು.

ಕೃಷಿ ಸಚಿವ ಶಿವಶಂಕರ್ ರೆಡ್ಡಿ ಮಾತನಾಡಿ, ಸಾವಿರಾರು ಅಡಿ ಕೊರೆದರೂ ಅಂತರ್ಜಲ ಲಭ್ಯವಾಗುತ್ತಿಲ್ಲ, ಹಾಗಾಗಿ ಸಾಂಪ್ರದಾಯ ನೀರಾವರಿ ಪದ್ಧತಿಗೆ ಬದಲಾಗಿ ಸೂಕ್ಷ್ಮ ನೀರಾವರಿ ವ್ಯವಸ್ಥೆ ಅಳವಡಿಸಿಕೊಳ್ಳುವ ನಿಟ್ಟಿನಲ್ಲಿ ರೈತರಿಗೆ ಅಗತ್ಯ ತಾಂತ್ರಿಕ ಸೌಲಭ್ಯಗಳನ್ನು ಒದಗಿಸಲಾಗುವುದು ಎಂದರು.

ಅಸೋಸಿಯೇಷನ್ ಅಧ್ಯಕ್ಷ ಡಾ. ಮುರಳಿ ಕೃಷ್ಣ ರೆಡ್ಡಿ ಮಾತನಾಡಿ, ಇಂಡೋ ಇಸ್ರೇಲ್ ನೀರಾವರಿಯ ಉಪಕ್ರಮಗಳ ಅನುಷ್ಠಾನಕ್ಕೆ ಸಂಬಂಧಿಸಿದಂತೆ ವ್ಯಾಪಕ ಸಮಾಲೋಚನೆ ನಡೆಸಲಾಗುತ್ತಿದೆ.

ಕಾರ್ಯಾಗಾರದಲ್ಲಿ ಬಾಗಲಕೋಟೆಯ ತೋಟಗಾರಿಕಾ ವಿಜ್ಞಾನ ವಿಶ್ವವಿದ್ಯಾಲಯದ ನಿವೃತ್ತ ಕುಲಪತಿ ಡಾ. ಡಿ.ಎಲ್. ಮಹೇಶ್ವರ, ಎಫ್‌ಕೆಸಿಸಿಐ ಅಧ್ಯಕ್ಷ ಸುಧಾಕರ್ ಎಸ್ ಶೆಟ್ಟಿ ಸೇರಿದಂತೆ ಪ್ರಮುಖರು ಉಪಸ್ಥಿತರಿದ್ದರು.



ಬೆಂಗಳೂರಿನಲ್ಲಿ ಬುಧವಾರ ಇಂಡಿಯನ್ ಟೆಕ್ನಾಲಜಿ ಕಾಂಗ್ರೆಸ್ ಅಸೋಸಿಯೇಷನ್, ಸಾಯಿ ಸಂಕೇತ್ ಹಾಗೂ ಅಗ್ರಿಟೆಕ್ ಸಂಯುಕ್ತ ಆಶ್ರಯದಲ್ಲಿ ಆಯೋಜಿಸಿರುವ 'ಭವಿಷ್ಯದಲ್ಲಿ ರೈತ ಕೇಂದ್ರಿತ ನೀರಾವರಿ ಅಭಿವೃದ್ಧಿ' ಕುರಿತ 2 ದಿನಗಳ ಕಾರ್ಯಾಗಾರವನ್ನು ಕೃಷಿ ಸಚಿವ ಶಿವಶಂಕರ್ ರೆಡ್ಡಿ ಉದ್ಘಾಟಿಸಿದರು. ಇತರ ಪ್ರಮುಖರು ಹಾಜರಿದ್ದರು.

ಸಂಜೆ ಸಮಾಚಾರ್ ಬುಧವಾರ 6 ಮಾರ್ಚ್ 2019



ನಗರದಲ್ಲಿ ಇಂದು ಭಾರತೀಯ ಟೆಕ್ನಾಲಜಿ ಕಾಂಗ್ರೆಸ್ ಅಸೋಸಿಯೇಷನ್ ಅವತಿಯಿಂದ ಆಯೋಜಿಸಲಾಗಿದ್ದ ಸ್ಮಾರ್ಟ್ ವಾಟರ್‌ಟೆಕ್ ಸಮ್ಮೇಳನವನ್ನು ಕೃಷಿ ಸಚಿವ ಶಿವಶಂಕರ ರೆಡ್ಡಿ ಉದ್ಘಾಟಿಸಿದರು.

ಬೋಧಿವೃಕ್ಷ ಕರ್ನಾಟಕ ಶನಿವಾರ, 2 ಮಾರ್ಚ್ 2019, ಬೆಂಗಳೂರು

# ಅಧ್ಯಾತ್ಮದಿಂದ ಅಂತರಂಗದ ಅಂಧಕಾರ ನಾಶ

ಬೋಧಿವೃಕ್ಷ ಸುದ್ದಿಲೋಕ
feedback@bodhivruksha.com

ಬೆಂಗಳೂರು: ಮನದ ಅಂಧಕಾರ ಹೋಗಲಾಡಿಸಲು ಅಧ್ಯಾತ್ಮದ ಬೆಳಕಿನ ಅಗತ್ಯವಿದೆ ಎಂದು ಹೊರನಾಡು ಅನ್ನಪೂರ್ಣೇಶ್ವರಿ ದೇವಸ್ಥಾನದ ಧರ್ಮಕರ್ತ ಡಾ.ಜಿ. ಭೀಮೇಶ್ವರ ಜೋಷಿ ಅಭಿಪ್ರಾಯಪಟ್ಟಿದ್ದಾರೆ.

ವಾಡಿಯಾ ಸಭಾಂಗಣದಲ್ಲಿ ಭಾನುವಾರ ಕರ್ನಾಟಕ ಸಂಸ್ಕೃತ ವಿಶ್ವವಿದ್ಯಾಲಯ ವಿಶ್ರಾಂತ ಕುಲಪತಿ ಮಲ್ಲೇಪುರಂ ಜಿ.ವೆಂಕಟೇಶ ಅವರ 'ಲೋಕದ ಬೆಡಗು' ಗ್ರಂಥ ಬಿಡುಗಡೆಗೊಳಿಸಿ ಮಾತನಾಡಿದರು. ನಮ್ಮ ದೇಶದಲ್ಲಿ ಆಧ್ಯಾತ್ಮಿಕತೆ ಎಂಬುದು ಪಂಚಭೂತಗಳಲ್ಲಿ ಅಡಗಿದೆ. ಆದ್ದರಿಂದಲೇ ಭಾರತ ಶ್ರೇಷ್ಠ ಸಂತ ಸ್ಥಾನದಲ್ಲಿದೆ ಎಂದರು.

ಯಾವುದೇ ವ್ಯಕ್ತಿಯ ಬದುಕು ಆದರ್ಶವಾಗಿರಬೇಕು ಹೊರತು ನಿದರ್ಶನವಾಗಿರಬಾರದು. ಈ ನಿಟ್ಟಿನಲ್ಲಿ ಪ್ರೊ.ಮಲ್ಲೇಪುರಂ ಅವರ ಲೋಕದ ಬೆಡಗು ಅಪರೂಪದ ಪುಸ್ತಕವಾಗಿದೆ. ಈ ಪುಸ್ತಕದಲ್ಲಿ 25 ಮಹಾದಾರ್ಶನಿಕರ ಪರಿಚಯ ಎಲ್ಲರಿಗೂ ಸ್ಫೂರ್ತಿಯಾಗಿದೆ. ಈ ಪುಸ್ತಕ ಸನಾತನ ಧರ್ಮದಲ್ಲಿನ ಶ್ರೇಷ್ಠತೆಯನ್ನು ಕಾಯ್ದುಕೊಂಡು ವಜ್ರಸ್ವರೂಪಿಯಾಗಿ ರೂಪುಗೊಂಡಿದೆ ಎಂದರು.

ಭಾರತದ ಜ್ಞಾನ ಪರಂಪರೆ ಬಗ್ಗೆ ಬೇರೆ ಬೇರೆ ಭಾಷೆಯಲ್ಲಿ ಉಲ್ಲೇಖಿಸಲಾಗಿದೆ. ಅವಧೂತರ ಬೆಡಗು ಮೂಡಿಸುವ ಅಂಶಗಳು ಪ್ರೊ.ಮಲ್ಲೇಪುರಂ ಅವರ ಲೋಕದ ಬೆಡಗು ಪುಸ್ತಕದಲ್ಲಿವೆ. ಸನಾತನ ಧರ್ಮವನ್ನು ಮತ್ತೆ ಓದಲು ಈ ಪುಸ್ತಕ ಸಹಕಾರಿಯಾಗಿದೆ. ಸಂಸ್ಕೃತದ ನಾನಾ ಪ್ರಕಾರಗಳಲ್ಲಿ ಪ್ರಬುದ್ಧತೆ ಹಾಗೂ ಉಪನಿಷತ್ತು ಕಥೆಗಳನ್ನು ಆಧರಿಸಿ ಉನ್ನತಮಟ್ಟದಲ್ಲಿ ಈ ಪುಸ್ತಕ ರಚಿಸಿರುವ ಮಲ್ಲೇಪುರಂ ಅವರ ಪ್ರಯತ್ನ ಪ್ರಶಂಸನೀಯ ಎಂದು ಗ್ರಂಥ ಕುರಿತು ಶತಾವಧಾನಿ ಡಾ.ಆರ್. ಗಣೇಶ್ ತಿಳಿಸಿದರು.

ವಿದ್ವಾಂಸ ಡಾ. ಕೆ.ಜಿ. ಸುಬ್ರಾಯ ಶರ್ಮ, ಅರಬಿಂದೋ ಸೊಸೈಟಿ ಅಧ್ಯಕ್ಷ ಡಾ. ಅಜಿತ್ ಸಬ್ನೀಸ್, ಬಳ್ಳಕೆರೆ ಕೆಂಚಾವಧೂತ ಮಠ ವ್ಯವಸ್ಥಾಪಕ ಕೆಂಚಪ್ಪ, ವೀರಪ್ಪ ತಾತನವರ ಆಶ್ರಮದ ವೀರಭದ್ರಪ್ಪ, ಲಕ್ಷ್ಮೀ ಮುದ್ರಣಾಲಯದ ಬಿ.ಆರ್.ಅಶೋಕ್ ಕುಮಾರ್ ಮೊದಲಾದವರು ಉಪಸ್ಥಿತರಿದ್ದರು.



ಸಂಸ್ಕೃತ ವಿಶ್ವವಿದ್ಯಾಲಯದ ವಿಶ್ರಾಂತ ಕುಲಪತಿ ಮಲ್ಲೇಪುರಂ ಜಿ. ವೆಂಕಟೇಶ್ ಅವರ ಭವದ ಬೆಡಗು ಪುಸ್ತಕ ಬಿಡುಗಡೆ ಸಮಾರಂಭ ವಾಡಿಯಾ ಸಭಾಂಗಣದಲ್ಲಿ ನಡೆಯಿತು. ಕಾರ್ಯಕ್ರಮದಲ್ಲಿ ಹೊರನಾಡು ಅನ್ನಪೂರ್ಣೇಶ್ವರಿ ದೇವಸ್ಥಾನದ ಧರ್ಮಕರ್ತ ಡಾ. ಜಿ. ಭೀಮೇಶ್ವರ ಜೋಷಿ, ಶತಾವಧಾನಿ ಆರ್. ಗಣೇಶ್ ಮತ್ತಿತರರು ಉಪಸ್ಥಿತರಿದ್ದರು.

# ಕೆ.ಟಿ. ಸತೀಶ್‌ರೆಡ್ಡಿ ಸಾರಥ್ಯದಲ್ಲಿ....

# "ಸೌಂದರ್ಯ ಲಹರಿ"




ಇತ್ತೀಚಿನ ದಿನಗಳಲ್ಲಿ ಚಲನಚಿತ್ರಗಳೆಂದರೆ ಕೇಲವ ಹೊಡಿ ಬಡಿ ಎನ್ನುವುದನ್ನು ಬಿಟ್ಟರೆ ಯಾವುದೇ ಕಾದಂಬರಿ ಆಧಾರಿತ ಚಿತ್ರಗಳು ತೆರೆಕಾಣುತ್ತಿಲ್ಲ. ಇನ್ನು ದಾರಾವಾಹಿಗಳನ್ನು ತೆಗೆದುಕೊಂಡರೆ ಕೇವಲ ಅಲ್ಲಿ ಮಹಿಳೆಯರಲ್ಲಿ ದ್ವೇಷ ಹುಟ್ಟಿಸುವ ರೀತಿಯಲ್ಲಿಯೇ ನಿರ್ದೇಶಕರು ಹೆಚ್ಚು ಬಿಂಬಿಸುತ್ತಾರೆ. ಅತ್ತೆಯನ್ನು ಕಂಡರೆ ಸೊಸೆಗಾಗುವುದಿಲ್ಲ, ನಾದಿನಿಯನ್ನು ಕಂಡರೆ ಅತ್ತಿಗೆಗಾಗುವುದಿಲ್ಲ, ವಾರಗಿತ್ತಿಯರನ್ನು ಕಂಡರೆ ವಾರಗಿತ್ತಿಯರಿಗೆ ಆಗುವುದಿಲ್ಲ ಹೀಗೆ ಹಲವಾರು ರೀತಿಯ ಕೌಟುಂಬಿಕ ಸಂಬಂಧಗಳನ್ನು ಅಳಿಸಿ ಹಾಕುತ್ತಿರುವ ಈ ಸಂದರ್ಭದಲ್ಲಿ ಖ್ಯಾತ ಕಾದಂಬರಿಕಾರ, ಆಧ್ಯಾತ್ಮಕ ಚಿಂತಕ, ಸಾಕಷ್ಟು ದೈನಿಕ ಪತ್ರಿಕೆಗಳಲ್ಲಿ, ವಾರಪತ್ರಿಕೆ ಹಾಗೂ




ಮಾಸಪತ್ರಿಕೆಗಳಲ್ಲಿ ತಮ್ಮದೇ ಶೈಲಿಯಲ್ಲಿ ಓದುಗರನ್ನು ಸೆಳೆದಿರುವ ವೈ.ಎನ್. ನಾಗೇಶ್‌ರವರು 'ಕೌಂಡಿನ್ಯ'ರೆಂದೇ ಖ್ಯಾತಿ ಪಡೆದಿರುವ ಧಾರಾವಾಹಿಗಳ ಹರಿಕಾರ ಇವರು ರಚಿಸಿರುವ ಮತ್ತೊಂದು ಕಾದಂಬರಿ 'ಸೌಂದರ್ಯ ಲಹರಿ'ಯ 2ನೇ ಆವೃತ್ತಿಯು ಬಿಡುಗಡೆಯಾಗಿದ್ದು ಈ ಕಾದಂಬರಿ ಇದೀಗ ಚಲನಚಿತ್ರವಾಗಿ ಹೊರಬರಲಿದೆ.

ಇದಕ್ಕೂ ಮುನ್ನ ಈ ಕಾದಂಬರಿಯನ್ನು ಲೋಕಾರ್ಪಣೆ ಮಾಡಿದ ಕರ್ನಾಟಕ ಸ್ಮಾರಕ ನಿಧಿ ಅಧ್ಯಕ್ಷರಾದ ಹಾಗೂ ಶೇಷಾದ್ರಿಪುರಂ ಶಿಕ್ಷಣ ದತ್ತಿಯ ಕಾರ್ಯದರ್ಶಿಗಳಾದ ಡಾ. ವೂಡೇ ಪಿ. ಕೃಷ್ಣರವರು ಕೃತಿಯನ್ನು ಲೋಕಾರ್ಪಣೆ ಮಾಡಿದರು. ಈ ಕಾರ್ಯಕ್ರಮವನ್ನು ಶೇಷಾದ್ರಿಪುರಂ ಸಂಜೆ ಪದವಿ ಪೂರ್ವ ಕಾಲೇಜಿನ ಕನ್ನಡ ಸಾಹಿತ್ಯ ವೇದಿಕೆಯಲ್ಲಿ ಆಯೋಜಿಸಲಾಗಿತ್ತು. ಡಾ. ವೂಡೇ ಪಿ. ಕೃಷ್ಣರವರು ಮಾತನಾಡುತ್ತಾ ಹಿಂದೆ ಕಾದಂಬರಿಗಳು ಚಲನಚಿತ್ರಗಳಾಗಿ ಸಾಕಷ್ಟು ಜನರ ಮನಸ್ಸಿನ ಮೇಲೆ ಪರಿಣಾಮ ಬೀರುತ್ತಿದ್ದವು. ಅದೆಷ್ಟೋ ಕುಟುಂಬಗಳು ಅನ್ಯೋನ್ಯವಾಗಿ ಪ್ರೀತಿ ವಿಶ್ವಾಸಗಳಿಂದ ಬದುಕು ಸಾಗಿಸಿದ ನಿದರ್ಶನಗಳು ನಮ್ಮ ಮುಂದಿವೆ. ಆದರೆ ಇಂದು ಚಲನಚಿತ್ರಗಳಲ್ಲಿ ಕಥೆಗೆ ಹೆಚ್ಚಿನ ಮಹತ್ವವೇ ಇಲ್ಲ ಹಾಗಾಗಿ ಚಲನಚಿತ್ರಗಳು ಜನರ ಮನಸ್ಸಿನ ಮೇಲೆ ಪ್ರಭಾವ ಬೀರಬೇಕು ಅಂತಹ ಒಂದು ಕಾದಂಬರಿಯನ್ನು 'ಕೌಂಡಿನ್ಯ'ರವರು ರಚಿಸಿದ್ದಾರೆ. ಇದನ್ನು ಚಲನಚಿತ್ರವಾಗಿ ನಿರ್ಮಿಸಲು ಮುಂದಾಗಿರುವುದು ಬೇರೆ ಯಾರೂ ಅಲ್ಲ, ಹಿಂದಿನಿಂದಲೂ ಸಾಂಸಾರಿಕ, ಕೌಟುಂಬಿಕ ಧಾರಾವಾಹಿಗಳನ್ನು ನೀಡಿ ಜನರ ಮನಸ್ಸಿಗೆ ಹತ್ತಿರವಾಗಿರುವ ಕೆ.ಟಿ. ಸತೀಶ್‌ರೆಡ್ಡಿಯವರು.

ಇವರು ಕೇವಲ ಧಾರಾವಾಹಿಗಳನ್ನಷ್ಟೇ ಅಲ್ಲದೆ ಇವರ ನಿರ್ದೇಶನದಲ್ಲಿ ಹಲವಾರು ಚಲನಚಿತ್ರಗಳು ಸಹ ಬಂದಿದ್ದು, ಇಂದಿನ ಯುವ ಜನತೆಯಲ್ಲಿ ಸಂಬಂಧಗಳ ಬಗ್ಗೆ ಹೆಚ್ಚು ಅರಿವು ಮೂಡಿಸುವ ಅವಿಭಕ್ತ ಕುಟುಂಬ ಹಾಗೂ ಅತೆ–ಸೊಸೆ ಸಂಬಂಧ ಹಾಗೂ ಸಂಬಂಧಗಳ ಕುರಿತು ಇರಬಹುದಾದ ಮಹತ್ವವನ್ನು ಜನತೆಗೆ ತಿಳಿಸುವ ಕೆಲಸ ಮಾಡಲು ಹೊರಟಿರುವುದು ನಿಜಕ್ಕೂ ಒಂದು ಸಾಧನೆಯೇ ಎಂದು ಶ್ಲಾಘಿಸಿದರು.

ಸತೀಶ್‌ರೆಡ್ಡಿಯವರು ಮೂಲತಃ ಕನಕಪುರದವರು. ಇವರು ನಿರ್ಮಿಸಿರುವ ಹೆಚ್ಚು ಧಾರಾವಾಹಿಗಳು ಹೆಂಗಳೆಯರ ಮನಮುಟ್ಟುವಂತಹವು. ಇನ್ನು ಚಲನಚಿತ್ರ ಕೂಡ ಸಾಕಷ್ಟು ಹೆಂಗಳೆಯರನ್ನು ಸೆಳೆಯುವಲ್ಲಿ ಯಶಸ್ಸು ಸಾಧಿಸಿರುತ್ತಾರೆ. ಇವರು ಕಳೆದ 30 ವರ್ಷಗಳಿಂದಲೂ ಇದೇ ರಂಗದಲ್ಲಿ ದುಡಿಯುತ್ತಾ ತಮ್ಮ ಜೀವನವನ್ನೇ ಚಿತ್ರರಂಗ ಹಾಗೂ ಕಿರುತೆರೆಗೆ ಮೀಸಲಿಟ್ಟಿದ್ದಾರೆ. ಇವರ ಈ ಪ್ರಯತ್ನ ಇವರಿಗೆ ಮತ್ತಷ್ಟು ಬಲ ನೀಡುತ್ತದೆ. ಈ ಚಿತ್ರ ಸಾಕಷ್ಟು ಯುವ ಜನರ ಮೇಲೆ ಪ್ರಭಾವ ಬೀರುತ್ತದೆ ಹಾಗೂ ದೇಶದ ಯುವಕ–ಯುವತಿಯರು ಎಲ್ಲಿ ತಪ್ಪು ಮಾಡುತ್ತಿದ್ದಾರೆ ಎನ್ನುವುದನ್ನು ಎಳೆ ಎಳೆಯಾಗಿ ಬಿಚ್ಚಿಡಲಿದ್ದಾರೆ.

ಒಬ್ಬ ನಿರ್ದೇಶಕ ಹತ್ತು ಪುಟಗಳಷ್ಟು ಕಥೆಯನ್ನು ಒಂದು ಸೀನ್‌ನಲ್ಲಿ ಹೇಳುವುದು ಬಹಳ ಸಾಹಸದ ಕೆಲಸ, ಅದು ನಿರ್ದೇಶಕನ ಮೇಲೆ ಅವಲಂಬಿಸಿರುತ್ತದೆ. ನಿರ್ದೇಶನವೆಂದರೆ ಹುಡುಗಾಟವಲ್ಲ, ನಿರ್ದೇಶಕನಾದವನು ಸಕಲ ವಿದ್ಯಾಪಾರಂಗತನಾಗಿರಬೇಕು ಅದಕ್ಕೆ ಅವರಿಗೆ ಸಾಹಿತ್ಯ ಹಾಗೂ ಬರವಣಿಗೆ




ತಿಳಿದಿರಬೇಕು ಎಂದರು. ಉದಾರೀಕರಣ, ಖಾಸಗೀಕರಣದ ಹಾವಳಿಯಿಂದ ಮನುಷ್ಯ ಸಂಬಂಧ ಹಾಳಾಗುತ್ತಿದೆ. ತಾಂತ್ರಿಕತೆಯ ಭರಾಟೆಯಿಂದ ಸಾಮಾಜಿಕ ಬದುಕು ಕಷ್ಟವಾಗುತ್ತಿದೆ. ಯುವಕರಲ್ಲಿ ಕೀಳರಿಮೆ ಹೆಚ್ಚುತ್ತಿದೆ. ಇತರರನ್ನು ಅನುಕರಣೆ ಮಾಡಬಾರದು ಎಂದರು. ಬರಹವನ್ನು ನಿರಂತರವಾಗಿಟ್ಟುಕೊಳ್ಳಿ. ಓದುಗರ ಮನಸ್ಸು ಅರಳುವಂತಹ ಬರಹ ಬರೆಯಿರಿ ಎಂದು ವಿದ್ಯಾರ್ಥಿಗಳಿಗೆ ಕರೆ ನೀಡಿದರು.

ಇವರ ಯಶಸ್ಸಿಗೆ ಬೆನ್ನೆಲುಬಾಗಿ ನಿಂತವರು ಇವರ ಮಿತ್ರರು ಚಲನಚಿತ್ರ ನಿರ್ಮಾಪಕರೂ ಆದಂತಹ ಅನಿಲ್ ನಾಯ್ಡುರವರು. ಇವರು ಸಹ ಕೇವಲ ನಿರ್ಮಾಪಕರು ಮಾತ್ರವೇ ಅಲ್ಲ, ಇವರು ತಮ್ಮದೇ ಆದಂತಹ ಸ್ಟುಡಿಯೋ ಹೊಂದಿದ್ದು ಧಾರಾವಾಹಿಗಳ ಚಲನಚಿತ್ರಗಳ ಡಬ್ಬಿಂಗ್ ಹಾಗೂ ಎಡಿಟಿಂಗ್‌ನಲ್ಲಿಯೂ ಸಹ ಪರಿಣಿತರು. ಇವರ ಬೆಂಬಲ ಸದಾ ಸತೀಶ್‌ರೆಡ್ಡಿಯವರಿಗಿರುವುದು ಒಂದು ರೀತಿಯ ನಿರ್ದೇಶಕನಿಗೆ ಆನೆಯ ಬಲವಿದ್ದಂತೆ.

ಕಾದಂಬರಿ ಲೋಕಾರ್ಪಣೆ ಕಾರ್ಯಕ್ರಮದಲ್ಲಿ ಕಾದಂಬರಿ ಕುರಿತು ಮಾತನಾಡಿದ ಸಾಹಿತಿ ಡಾ. ಪ್ರಕಾಶ್.ಎನ್. ನರಗುಂದ, ಅಧ್ಯಕ್ಷರು ಕನ್ನಡ ಜಾನಪದ ಪರಿಷತ್ತು ಬದಾಮಿ ತಾಲ್ಲೂಕು ಇವರು 'ಸಾಹಿತ್ಯ ಹೆಚ್ಚು ಹಿತವನ್ನು ನೀಡುತ್ತದೆ. ಯುವ ಜನರು ಹೆಚ್ಚಾಗಿ ಬರವಣಿಗೆಯಲ್ಲಿ ತೊಡಗಿಸಿಕೊಳ್ಳಬೇಕು. ನಿಮ್ಮ ಖುಷಿಗೆ ನೀವು ಬರೆಯಿರಿ. ಬರಹಗಳು ಯಾವಾಗ ಯಾರಿಗೆ ಪ್ರೇರಣೆಯಾಗುತ್ತದೆ. ಎಂದು ಹೇಳಲಾಗದು' ಎಂದರು.

ಕೌಂಡಿನ್ಯರವರ ಈ ಕಾದಂಬರಿ ಚಲನಚಿತ್ರವಾದ ಮೇಲೆ ಯುವ ವಿದ್ಯಾರ್ಥಿಗಳು ನೋಡಬೇಕು ಚಿತ್ರ ನೋಡುವುದರ ಮೂಲಕ ಕನ್ನಡ ಚಿತ್ರರಂಗವನ್ನು ಪ್ರೋತ್ಸಾಹಿಸಬೇಕು. ಇದರಲ್ಲಿನ ಒಳ್ಳೆಯ ಗುಣಗಳನ್ನು ತಾವುಗಳು ಜೀವನದಲ್ಲಿ ಅಳವಡಿಸಿಕೊಳ್ಳಬೇಕೆಂದರು. ಕಾರ್ಯಕ್ರಮದಲ್ಲಿ ಪ್ರಾಚಾರ್ಯರಾದ ಪ್ರೋ. ಎನ್.ಎಸ್. ಸತೀಶ್‌ರವರು ಉಪಸ್ಥಿತರಿದ್ದರು.

–ಎ.ಕೆ

## ಕೆ.ಟಿ. ಸತೀಶ್‌ರೆಡ್ಡಿ ಸಾರಥ್ಯದಲ್ಲಿ....

# "ಸೌಂದರ್ಯ ಲಹರಿ"

ಇತ್ತೀಚಿನ ದಿನಗಳಲ್ಲಿ ಚಲನಚಿತ್ರಗಳೆಂದರೆ ಕೇಲವ ಹೊಡಿ ಬಡಿ ಎನ್ನುವುದನ್ನು ಬಿಟ್ಟರೆ ಯಾವುದೇ ಕಾದಂಬರಿ ಆಧಾರಿತ ಚಿತ್ರಗಳು ತೆರೆಕಾಣುತ್ತಿಲ್ಲ. ಇನ್ನು ದಾರಾವಾಹಿಗಳನ್ನು ತೆಗೆದುಕೊಂಡರೆ ಕೇವಲ ಅಲ್ಲಿ ಮಹಿಳೆಯರಲ್ಲಿ ದ್ವೇಷ ಹುಟ್ಟಿಸುವ ರೀತಿಯಲ್ಲಿಯೇ ನಿರ್ದೇಶಕರು ಹೆಚ್ಚು ಬಿಂಬಿಸುತ್ತಾರೆ. ಅತ್ತೆಯನ್ನು ಕಂಡರೆ ಸೊಸೆಗಾಗುವುದಿಲ್ಲ, ನಾದಿನಿಯನ್ನು ಕಂಡರೆ ಅತ್ತಿಗೆಗಾಗುವುದಿಲ್ಲ, ವಾರಗಿತ್ತಿಯರನ್ನು ಕಂಡರೆ ವಾರಗಿತ್ತಿಯರಿಗೆ ಆಗುವುದಿಲ್ಲ ಹೀಗೆ ಕ⁻⁻ನಾರು ರೀತಿಯ ಕೌಟುಂಬಿಕ ⁻ಧಗಳನ್ನು ಅಳಿಸಿ ಹಾಕುತ್ತಿರುವ ಈ ಸಂದರ್ಭದಲ್ಲಿ ಖ್ಯಾತ ಕಾದಂಬರಿಕಾರ, ಆಧ್ಯಾತ್ಮಿಕ ಚಿಂತಕ, ಸಾಕಷ್ಟು ದೈನಿಕ ಪತ್ರಿಕೆಗಳಲ್ಲಿ, ವಾರಪತ್ರಿಕೆ ಹಾಗೂ ಮಾಸಪತ್ರಿಕೆಗಳಲ್ಲಿ ತಮ್ಮದೇ ಶೈಲಿಯಲ್ಲಿ ಓದುಗರನ್ನು ಸೆಳೆದಿರುವ ವೈ.ಎನ್. ನಾಗೇಶ್‌ರವರು 'ಕೌಂಡಿನ್ಯ'ರೆಂದೇ ಖ್ಯಾತಿ ಪಡೆದಿರುವ ಧಾರಾವಾಹಿಗಳ ಹರಿಕಾರ ಇವರು ರಚಿಸಿರುವ ಮತ್ತೊಂದು ಕಾದಂಬರಿ 'ಸೌಂದರ್ಯ ಲಹರಿ'ಯ 2ನೇ ಆವೃತ್ತಿಯು ಬಿಡುಗಡೆಯಾಗಿದ್ದು ಈ ಕಾದಂಬರಿ ಇದೀಗ ಚಲನಚಿತ್ರವಾಗಿ ಹೊರಬರಲಿದೆ.

ಇದಕ್ಕೂ ಮುನ್ನ ಈ ಕಾದಂಬರಿಯನ್ನು ಲೋಕಾರ್ಪಣೆ ಮಾಡಿದ ಕರ್ನಾಟಕ ಸ್ಮಾರಕ ನಿಧಿ ಅಧ್ಯಕ್ಷರಾದ ಹಾಗೂ ಶೇಷಾದ್ರಿಪುರಂ ಶಿಕ್ಷಣ ದತ್ತಿಯ ಕಾರ್ಯದರ್ಶಿಗಳಾದ ಡಾ. ವೂಡೇ ಪಿ. ಕೃಷ್ಣರವರು ಕೃತಿಯನ್ನು ಲೋಕಾರ್ಪಣೆ ಮಾಡಿದರು. ಈ ಕಾರ್ಯಕ್ರಮವನ್ನು ಶೇಷಾದ್ರಿಪುರಂ ಸಂಜೆ ಪದವಿ ಪೂರ್ವ ಕಾಲೇಜಿನ ಕನ್ನಡ ಸಾಹಿತ್ಯ ವೇದಿಕೆಯಲ್ಲಿ ⁻ಯೋಜಿಸಲಾಗಿತ್ತು. ಡಾ. ವೂಡೇ ಪಿ. ⁻ಣ್ಣರವರು ಮಾತನಾಡುತ್ತಾ ಹಿಂದೆ ಕಾದಂಬರಿಗಳು ಚಲನಚಿತ್ರಗಳಾಗಿ ಸಾಕಷ್ಟು ಜನರ ಮನಸ್ಸಿನ ಮೇಲೆ ಪರಿಣಾಮ ಬೀರುತ್ತಿದ್ದವು. ಅದೆಷ್ಟೋ ಕುಟುಂಬಗಳು ಅನ್ಯೋನ್ಯವಾಗಿ ಪ್ರೀತಿ ವಿಶ್ವಾಸಗಳಿಂದ ಬದುಕು ಸಾಗಿಸಿದ ನಿದರ್ಶನಗಳು ನಮ್ಮ ಮುಂದಿದೆ. ಆದರೆ ಇಂದು ಚಲನಚಿತ್ರಗಳಲ್ಲಿ ಕಥೆಗೆ ಹೆಚ್ಚಿನ ಮಹತ್ವವೇ ಇಲ್ಲ ಹಾಗಾಗಿ ಚಲನಚಿತ್ರಗಳು ಜನರ ಮನಸ್ಸಿನ ಮೇಲೆ ಪ್ರಭಾವ ಬೀರಬೇಕು ಅಂತಹ ಒಂದು ಕಾದಂಬರಿಯನ್ನು 'ಕೌಂಡಿನ್ಯ'ರವರು ರಚಿಸಿದ್ದಾರೆ. ಇದನ್ನು ಚಲನಚಿತ್ರವಾಗಿ ನಿರ್ಮಿಸಲು ಮುಂದಾಗಿರುವುದು ಬೇರೆ ಯಾರೂ ಅಲ್ಲ, ಹಿಂದಿನಿಂದಲೂ ಸಾಂಸಾರಿಕ, ಕೌಟುಂಬಿಕ ಧಾರಾವಾಹಿಗಳನ್ನು ನೀಡಿ ಜನರ ಮನಸ್ಸಿಗೆ ಹತ್ತಿರವಾಗಿರುವ ಕೆ.ಟಿ. ಸತೀಶ್‌ರೆಡ್ಡಿಯವರು.






ಇವರು ಕೇವಲ ಧಾರಾವಾಹಿಗಳನ್ನಷ್ಟೇ ಅಲ್ಲದೆ ಇವರ ನಿರ್ದೇಶನದಲ್ಲಿ ಹಲವಾರು ಚಲನಚಿತ್ರಗಳು ಸಹ ಬಂದಿದ್ದು, ಇಂದಿನ ಯುವ ಜನತೆಯಲ್ಲಿ ಸಂಬಂಧಗಳ ಬಗ್ಗೆ ಹೆಚ್ಚು ಅರಿವು ಮೂಡಿಸುವ ಅವಿಭಕ್ತ ಕುಟುಂಬ ಹಾಗೂ ಅತ್ತೆ-ಸೊಸೆ ಸಂಬಂಧ ಹಾಗೂ ಸಂಬಂಧಗಳ ಕುರಿತು ಇರಬಹುದಾದ ಮಹತ್ವವನ್ನು ಜನತೆಗೆ ತಿಳಿಸುವ ಕೆಲಸ ಮಾಡಲು ಹೊರಟಿರುವುದು ನಿಜಕ್ಕೂ ಒಂದು ಸಾಧನೆಯೇ ಎಂದು ಶ್ಲಾಘಿಸಿದರು.

ಸತೀಶ್‌ರೆಡ್ಡಿಯವರು ಮೂಲತಃ ಕನಕಪುರದವರು. ಇವರು ನಿರ್ಮಿಸಿರುವ ಹೆಚ್ಚು ಧಾರಾವಾಹಿಗಳು ಹೆಂಗಳೆಯರ ಮನಮುಟ್ಟುವಂತಹವು. ಇನ್ನು ಚಲನಚಿತ್ರ ಕೂಡ ಸಾಕಷ್ಟು ಹೆಂಗಳೆಯರನ್ನು ಸೆಳೆಯುವಲ್ಲಿ ಯಶಸ್ಸು ಸಾಧಿಸಿರುತ್ತಾರೆ. ಇವರು ಕಳೆದ 30 ವರ್ಷಗಳಿಂದಲೂ ಇದೇ ರಂಗದಲ್ಲಿ ದುಡಿಯುತ್ತಾ ತಮ್ಮ ಜೀವನವನ್ನೇ ಚಿತ್ರರಂಗ ಹಾಗೂ ಕಿರುತೆರೆಗೆ ಮೀಸಲಿಟ್ಟಿದ್ದಾರೆ. ಇವರ ಈ ಪ್ರಯತ್ನ ಇವರಿಗೆ ಮತ್ತಷ್ಟು ಬಲ ನೀಡುತ್ತದೆ. ಈ ಚಿತ್ರ ಸಾಕಷ್ಟು ಯುವ ಜನರ ಮೇಲೆ ಪ್ರಭಾವ ಬೀರುತ್ತದೆ ಹಾಗೂ ದೇಶದ ಯುವಕ-ಯುವತಿಯರು ಎಲ್ಲಿ ತಪ್ಪು ಮಾಡುತ್ತಿದ್ದಾರೆ ಎನ್ನುವುದನ್ನು ಎಳೆ ಎಳೆಯಾಗಿ ಬಿಚ್ಚಿಡಲಿದ್ದಾರೆ.

ಒಬ್ಬ ನಿರ್ದೇಶಕ ಹತ್ತು ಪುಟಗಳಷ್ಟು ಕಥೆಯನ್ನು ಒಂದು ಸೀನ್‌ನಲ್ಲಿ ಹೇಳುವುದು ಬಹಳ ಸಾಹಸದ ಕೆಲಸ. ಅದು ನಿರ್ದೇಶಕನ ಮೇಲೆ ಅವಲಂಬಿಸಿರುತ್ತದೆ. ನಿರ್ದೇಶನವೆಂದರೆ ಹುಡುಗಾಟವಲ್ಲ, ನಿರ್ದೇಶಕನಾದವನು ಸಕಲ ವಿದ್ಯಾಪಾರಂಗತನಾಗಿರಬೇಕು ಅದಕ್ಕೆ ಅವರಿಗೆ ಸಾಹಿತ್ಯ ಹಾಗೂ ಬರವಣಿಗೆ ತಿಳಿದಿರಬೇಕು ಎಂದರು. ಉದಾರೀಕರಣ, ಖಾಸಗೀಕರಣದ ಹಾವಳಿಯಿಂದ ಮನುಷ್ಯ ಸಂಬಂಧ ಹಾಳಾಗುತ್ತಿದೆ. ತಂತ್ರಿಕತೆಯ ಭರಾಟೆಯಿಂದ ಸಾಮಾಜಿಕ ಬದುಕು ಕಷ್ಟವಾಗುತ್ತಿದೆ. ಯುವಕರಲ್ಲಿ ಕೀಳರಿಮೆ ಹೆಚ್ಚುತ್ತಿದೆ. ಇತರರನ್ನು ಅನುಕರಣೆ ಮಾಡಬಾರದು ಎಂದರು. ಬರಹವನ್ನು ನಿರಂತರವಾಗಿಟ್ಟುಕೊಳ್ಳಿ, ಓದುಗರ ಮನಸ್ಸು ಅರಳುವಂತಹ ಬರಹ ಬರೆಯಿರಿ ಎಂದು ವಿದ್ಯಾರ್ಥಿಗಳಿಗೆ ಕರೆ ನೀಡಿದರು.

ಇವರ ಯಶಸ್ಸಿಗೆ ಬೆನ್ನೆಲುಬಾಗಿ ನಿಂತವರು ಇವರ ಮಿತ್ರರು ಚಲನಚಿತ್ರ ನಿರ್ಮಾಪಕರೂ ಆದಂತಹ ಅನಿಲ್ ನಾಯ್ಡುರವರು. ಇವರು ಸಹ ಕೇವಲ ನಿರ್ಮಾಪಕರು ಮಾತ್ರವೇ ಅಲ್ಲ, ಇವರು ತಮ್ಮದೇ ಆದಂತಹ ಸ್ಟುಡಿಯೋ ಹೊಂದಿದ್ದು ಧಾರಾವಾಹಿಗಳ ಚಲನಚಿತ್ರಗಳ ಡಬ್ಬಿಂಗ್ ಹಾಗೂ ಎಡಿಟಿಂಗ್‌ನಲ್ಲಿಯೂ ಸಹ ಪರಿಣಿತರು. ಇವರ ಬೆಂಬಲ ಸದಾ ಸತೀಶ್‌ರೆಡ್ಡಿಯವರಿಗಿರುವುದು ಒಂದು ರೀತಿಯ ನಿರ್ದೇಶಕನಿಗೆ ಆನೆಯ ಬಲವಿದ್ದಂತೆ.

ಕಾದಂಬರಿ ಲೋಕಾರ್ಪಣೆ ಕಾರ್ಯಕ್ರಮದಲ್ಲಿ ಕಾದಂಬರಿ ಕುರಿತು ಮಾತನಾಡಿದ ಸಾಹಿತಿ ಡಾ. ಪ್ರಕಾಶ್.ಎನ್. ನರಗುಂದ, ಅಧ್ಯಕ್ಷರು ಕನ್ನಡ ಜಾನಪದ ಪರಿಷತ್ತು ಬದಾಮಿ ತಾಲ್ಲೂಕು ಇವರು 'ಸಾಹಿತ್ಯ ಹೆಚ್ಚು ಹಿತವನ್ನು ನೀಡುತ್ತದೆ. ಯುವ ಜನರು ಹೆಚ್ಚಾಗಿ ಬರವಣಿಗೆಯಲ್ಲಿ ತೊಡಗಿಸಿಕೊಳ್ಳಬೇಕು. ನಿಮ್ಮ ಖುಷಿಗೆ ನೀವು ಬರೆಯಿರಿ. ಬರಹಗಳು ಯಾವಾಗ ಯಾರಿಗೆ ಪ್ರೇರಣೆಯಾಗುತ್ತದೆ ಎಂದು ಹೇಳಲಾಗದು' ಎಂದರು.

ಕೌಂಡಿನ್ಯರವರ ಈ ಕಾದಂಬರಿ ಚಲನಚಿತ್ರವಾದ ಮೇಲೆ ಯುವ ವಿದ್ಯಾರ್ಥಿಗಳು ನೋಡಬೇಕು ಚಿತ್ರ ನೋಡುವುದರ ಮೂಲಕ ಕನ್ನಡ ಚಿತ್ರರಂಗವನ್ನು ಪ್ರೋತ್ಸಾಹಿಸಬೇಕು. ಇದರಲ್ಲಿನ ಒಳ್ಳೆಯ ಗುಣಗಳನ್ನು ತಾವುಗಳು ಜೀವನದಲ್ಲಿ ಅಳವಡಿಸಿಕೊಳ್ಳಬೇಕೆಂದರು. ಕಾರ್ಯಕ್ರಮದಲ್ಲಿ ಪ್ರಾಚಾರ್ಯರಾದ ಪ್ರೋ. ಎನ್.ಎಸ್. ಸತೀಶ್‌ರವರು ಉಪಸ್ಥಿತರಿದ್ದರು.

–ವಿ.ಕೆ



# ಸಂಯುಕ್ತ ಕರ್ನಾಟಕ

ಸೋಮವಾರ, 25, ಫೆಬ್ರವರಿ, 2019


## ಜಾತಿ ಹೆಸರಲ್ಲಿ ಟೀಕೆ ಸಲ್ಲ

ಸಂ.ಕ.ಸಮಾಚಾರ ಬೆಂಗಳೂರು

ಸಮಾಜವನ್ನು ಕಟ್ಟುವ ಸಾಹಿತ್ಯದ ಕೊರತೆ ಕನ್ನಡ ಸಾಹಿತ್ಯದಲ್ಲಿದೆ ಎಂದು ನಿವೃತ್ತ ನ್ಯಾಯಮೂರ್ತಿ ಎನ್. ಕುಮಾರ್ ಅಭಿಪ್ರಾಯಪಟ್ಟರು.

ವಾಡಿಯಾ ಸಭಾಂಗಣದಲ್ಲಿ ಆಯೋಜಿಸಿದ್ದ ಸಂಸ್ಕೃತ ವಿವಿ ವಿಶ್ರಾಂತ ಕುಲಪತಿ ಮಲ್ಲೇಪುರಂ ಜಿ ವೆಂಕಟೇಶ ಅವರ 'ಲೋಕದ ಬೆಡಗು' ಗ್ರಂಥ ಬಿಡುಗಡೆ ಸಮಾರಂಭದಲ್ಲಿ ಮಾತನಾಡಿ, ಸಮಾಜವನ್ನು ಕಟ್ಟುವ ಸಾಹಿತ್ಯ ಸೃಷ್ಟಿ ಮಾಡುವವರ ಕೊರತೆ ನಮ್ಮಲ್ಲಿದೆ. ಎಲ್ಲ ಮಹನೀಯರು ಧರ್ಮದ ಬಗ್ಗೆ ಮಾತನಾಡುತ್ತಾರೆ. ಅನುಕೂಲಕ್ಕೆ ತಕ್ಕಂತೆ ಜಾತಿಯನ್ನು ತಂದು ಸಮಾಜವನ್ನು ಟೀಕಿಸುವುದು ಹೆಚ್ಚಾಗಿದೆ ಎಂದು ಬೇಸರ ವ್ಯಕ್ತಪಡಿಸಿದರು.

ಶತಾವಧಾನಿ ಡಾ. ಆರ್. ಗಣೇಶ ಮಾತನಾಡಿ, ಆಧ್ಯಾತ್ಮಿಕ ಲೇಪನ ಎಲ್ಲೆಡೆ ಇದೆ. ಭಾರತದ ಜ್ಞಾನ ಪರಂಪರೆ ಬಗ್ಗೆ ಬೇರೆ ಬೇರೆ ಭಾಷೆಯಲ್ಲಿ ಉಲ್ಲೇಖಿಸಲಾಗಿದೆ. ಅವಧೂತರ ಬೆಡಗು ಮೂಡಿಸುವ ಅಂಶಗಳು ಪ್ರೊ. ಮಲ್ಲೇಪುರಂ ಅವರ ಲೋಕದ ಬೆಡಗು ಪುಸ್ತಕದಲ್ಲಿದೆ. ಸಂಸ್ಕೃತದ ನಾನಾ ಪ್ರಕಾರಗಳಲ್ಲಿ ಪ್ರಬುದ್ಧತೆ ಹಾಗೂ ಉಪನಿಷತ್ತಿನ ಕಥೆಗಳನ್ನು ಆಧರಿಸಿ ಪುಸ್ತಕ ರಚಿಸಿರುವ ಅವರ ಪ್ರಯತ್ನ ಶ್ಲಾಘನೀಯ ಎಂದರು.

ಗಾಂಧಿ ಸ್ಮಾರಕನಿಧಿ ಅಧ್ಯಕ್ಷ ಡಾ. ವೂಡೇ ಪಿ. ಕೃಷ್ಣ ಮಾತನಾಡಿ, ದೇಶದ ದೊಡ್ಡ ಶಕ್ತಿ ಆಧ್ಯಾತ್ಮಿಕ. ಅದನ್ನು ನಾವು ಮರೆಯುತ್ತಿದ್ದೇವೆ. ವಿದ್ಯಾರ್ಥಿಗಳ ಚಾರಿತ್ರ್ಯ ನಿರ್ಮಾಣ ಮಾಡುವ ಆಧ್ಯಾತ್ಮಿಕ ಶೂನ್ಯವಾಗಿದೆ. ಯುವ ಪೀಳಿಗೆ ಆಧ್ಯಾತ್ಮಿಕ ಒಲವು ತೋರಬೇಕು ಎಂದು ಹೇಳಿದರು.

ವಿಶ್ರಾಂತ ಕುಲಪತಿ ಪ್ರೊ. ಮಲ್ಲೇಪುರಂ ಜಿ. ವೆಂಕಟೇಶ, ಡಾ.ಕೆ.ಜಿ. ಸುಬ್ರಾಯ ಶರ್ಮ, ಅರವಿಂದೋ ಸೊಸೈಟಿ ಅಧ್ಯಕ್ಷ ಡಾ.ಅಜಿತ್ ಸಬ್ನೀಸ್ ಉಪಸ್ಥಿತರಿದ್ದರು.

ನಂ. 1 ಕನ್ನಡ ದಿನಪತ್ರಿಕೆ

VIJAYAVANI BENGALURU
ಸೋಮವಾರ 25 ಫೆಬ್ರವರಿ 2019
25 FEBRUARY 2019

# ಅಧ್ಯಾತ್ಮದಿಂದ ಅಂತರಂಗದ ಅಂಧಕಾರ ನಾಶ

## ಡಾ. ಜಿ. ಭೀಮೇಶ್ವರ ಜೋಷಿ ಅಭಿಮತ | ಮಲ್ಲೇಪುರಂ ಕೃತಿ 'ಲೋಕದ ಬೆಡಗು' ಬಿಡುಗಡೆ

ವಿಜಯವಾಣಿ ಸುದ್ದಿಜಾಲ ಬೆಂಗಳೂರು

ಅಂತರಾತ್ಮದ ಅಂಧಕಾರ ಹೋಗಲಾಡಿಸಲು ಆಧ್ಯಾತ್ಮಿಕ ಬೆಳಕಿನ ಅಗತ್ಯವಿದೆ ಎಂದು ಹೊರನಾಡು ಅನ್ನಪೂರ್ಣೇಶ್ವರಿ ದೇವಸ್ಥಾನದ ಧರ್ಮಕರ್ತ ಡಾ.ಜಿ. ಭೀಮೇಶ್ವರ ಜೋಷಿ ಹೇಳಿದ್ದಾರೆ.

ವಾಡಿಯಾ ಸಭಾಂಗಣದಲ್ಲಿ ಭಾನುವಾರ ಕರ್ನಾಟಕ ಸಂಸ್ಕೃತ ವಿಶ್ವವಿದ್ಯಾಲಯ ವಿಶ್ರಾಂತ ಕುಲಪತಿ ಹಾಗೂ ವಿಜಯವಾಣಿ ಅಂಕಣಕಾರ ಮಲ್ಲೇಪುರಂ ಜಿ. ವೆಂಕಟೇಶ ಅವರ 'ಲೋಕದ ಬೆಡಗು' ಗ್ರಂಥ ಬಿಡುಗಡೆಗೊಳಿಸಿ ಮಾತನಾಡಿದರು. ಭಾರತದಲ್ಲಿ ಆಧ್ಯಾತ್ಮಿಕತೆ ಎಂಬುದು ಪಂಚಭೂತಗಳಲ್ಲಿ ಅಡಗಿದೆ. ಆದ್ದರಿಂದಲೇ ಭಾರತ ಶ್ರೇಷ್ಠ, ಸಂತ ಸ್ಥಾನದಲ್ಲಿದೆ ಎಂದರು.

**'ಭವದ ಬೆಳಗು' ಅಂಕಣದ ಲೇಖನಗಳ ಸಂಗ್ರಹ**

ಯಾವುದೇ ವ್ಯಕ್ತಿಯ ಬದುಕು ಆದರ್ಶವಾಗಿರಬೇಕು ಹೊರತು ನಿದರ್ಶನವಾಗಿರಬಾರದು. ಈ ನಿಟ್ಟಿನಲ್ಲಿ ಪ್ರೊ. ಮಲ್ಲೇಪುರಂ ಅವರ ಲೋಕದ ಬೆಡಗು ಅಪರೂಪದ ಪುಸ್ತಕವಾಗಿದೆ. ವಿಜಯವಾಣಿ ಪತ್ರಿಕೆಯಲ್ಲಿ ಪ್ರಕಟವಾದ 'ಭವದ ಬೆಳಗು' ಅಂಕಣದ ಲೇಖನಗಳ ಸಂಗ್ರಹವಾದ ಈ ಪುಸ್ತಕದಲ್ಲಿ 25 ಮಹಾ ದಾರ್ಶನಿಕರ ಪರಿಚಯ ಎಲ್ಲರಿಗೂ ಸ್ಫೂರ್ತಿಯಾಗಿದೆ. ಈ ಪುಸ್ತಕ ಸನಾತನ ಧರ್ಮದಲ್ಲಿನ ಶ್ರೇಷ್ಠತೆಯನ್ನು ಕಾಯ್ದುಕೊಂಡು ವಜ್ರಸ್ವರೂಪಿಯಾಗಿ ರೂಪುಗೊಂಡಿದೆ ಎಂದು ಹೇಳಿದರು.

**ಮರು ಓದು:** ಆಧ್ಯಾತ್ಮಿಕ ಲೇಪನ ಎಲ್ಲೆಡೆ ಇದೆ. ಭಾರತದ ಜ್ಞಾನ ಪರಂಪರೆ ಬಗ್ಗೆ ಬೇರೆ ಬೇರೆ ಭಾಷೆಯಲ್ಲಿ ಉಲ್ಲೇಖಿಸಲಾಗಿದೆ. ಅವಧೂತರ ಬೆಡಗು ಮೂಡಿಸುವ ಅಂಶಗಳು ಪ್ರೊ. ಮಲ್ಲೇಪುರಂ ಅವರ ಲೋಕದ ಬೆಡಗು ಪುಸ್ತಕದಲ್ಲಿವೆ.



ವಿಜಯವಾಣಿ ಅಂಕಣಕಾರ ಮಲ್ಲೇಪುರಂ ಜಿ. ವೆಂಕಟೇಶ ಅವರ 'ಲೋಕದ ಬೆಡಗು' ಗ್ರಂಥವನ್ನು ಡಾ. ಭೀಮೇಶ್ವರ ಜೋಷಿ ಬಿಡುಗಡೆಗೊಳಿಸಿದರು. ಶತಾವಧಾನಿ ಡಾ.ಆರ್. ಗಣೇಶ್ ಮತ್ತಿತರರಿದ್ದರು.



**ಓದುಗರ ಪ್ರೇಮ ನನ್ನನ್ನು ಶ್ರೀಮಂತಗೊಳಿಸಿದೆ. ಪ್ರತಿಯೊಂದು ಕ್ಷೇತ್ರದ ಮಹಿಮೆ ಅಲ್ಲಿನ ಮಹಾ ದಾರ್ಶನಿಕ ಶಕ್ತಿ. ಎಲ್ಲರ ಸಹಕಾರದಿಂದಲೇ ಈ ಗ್ರಂಥ ರೂಪುಗೊಂಡಿರುವುದು.**

ಸಂಸ್ಕೃತ ವಿವಿಯ ವಿಶ್ರಾಂತ ಕುಲಪತಿ

ಸನಾತನ ಧರ್ಮವನ್ನು ಮತ್ತೆ ಓದಲು ಈ ಪುಸ್ತಕ ಸಹಕಾರಿಯಾಗಿದೆ. ಸಂಸ್ಕೃತದ ನಾನಾ ಪ್ರಕಾರಗಳಲ್ಲಿ ಪ್ರಬುದ್ಧತೆ ಹಾಗೂ ಉಪನಿಷತ್ತು ಕಥೆಗಳನ್ನು ಆಧರಿಸಿ ಉನ್ನತಮಟ್ಟದಲ್ಲಿ ಈ ಪುಸ್ತಕ ರಚಿಸಿರುವ ಮಲ್ಲೇಪುರಂ ಅವರ ಪ್ರಯತ್ನ ಪ್ರಶಂಸನೀಯ ಎಂದು ಗ್ರಂಥ ಕುರಿತು ಶತಾವಧಾನಿ ಡಾ.ಆರ್. ಗಣೇಶ್ ತಿಳಿಸಿದರು

ದೇಶದ ದೊಡ್ಡ ಶಕ್ತಿ ಅಧ್ಯಾತ್ಮ. ಇದನ್ನು ನಾವು ಮರೆಯುತ್ತಿದ್ದೇವೆ. ಇಂದಿನ ಯುವ ಪೀಳಿಗೆ ಅಧ್ಯಾತ್ಮದತ್ತ ಒಲವು ತೋರಬೇಕು ಎಂದು ಕರ್ನಾಟಕ ಗಾಂಧಿ ಸ್ಮಾರಕನಿಧಿ ಅಧ್ಯಕ್ಷ ಡಾ.ವೂಡೇ ಪಿ.ಕೃಷ್ಣ ಹೇಳಿದರು.

ಹೈಕೋರ್ಟ್‌ನ ನಿವೃತ್ತ ನ್ಯಾಯಮೂರ್ತಿ ಎನ್. ಕುಮಾರ್ ಮಾತನಾಡಿ, ಸಮನ್ವಯ ಸಮಾಜ ಕಟ್ಟುವ ಸಾಹಿತ್ಯ ಸೃಷ್ಟಿ ಮಾಡುವವರ ಕೊರತೆ ನಮ್ಮಲ್ಲಿದೆ. ಎಲ್ಲ ಮಹನೀಯರು ಧರ್ಮದ ಬಗ್ಗೆ ಮಾತನಾಡುತ್ತಾರೆ. ಅನುಕೂಲಕ್ಕೆ ತಕ್ಕಂತೆ ಜಾತಿಯನ್ನು ತಂದು ಸಮಾಜವನ್ನು ಬೈಯುವುದು, ಧರ್ಮವನ್ನು ಬೈಯುವುದು ಹೆಚ್ಚಾಗಿದೆ. ಇದು ನಿಲ್ಲಬೇಕು, ಎಲ್ಲ ಧರ್ಮಗಳನ್ನು ಸಾಹಿತಿಗಳು ಸಮಾನತೆಯಿಂದ ಕಾಣಬೇಕಿದೆ ಎಂದು ಹೇಳಿದರು.

ವಿದ್ವಾಂಸ ಡಾ. ಕೆ.ಜಿ. ಸುಬ್ರಾಯ ಶರ್ಮ, ಅರಬಿಂದೋ ಸೊಸೈಟಿ ಅಧ್ಯಕ್ಷ ಡಾ. ಅಜಿತ್ ಸಬ್ನೀಸ್, ಚಳ್ಳಕೆರೆ ಕೆಂಚಾವಧೂತ ಮಠ ವ್ಯವಸ್ಥಾಪಕ ಕೆಂಚಪ್ಪ, ವೀರಪ್ಪ ತಾತನವರ ಆಶ್ರಮದ ವೀರಭದ್ರಪ್ಪ, ಲಕ್ಷ್ಮೀ ಮುದ್ರಣಾಲಯದ ಬಿ.ಆರ್. ಅಶೋಕ್ ಕುಮಾರ್ ಸೇರಿ ಹಲವರನ್ನು ಗೌರವಿಸಲಾಯಿತು.

ವಿಶ್ವವಾಣಿ

ಬೆಂಗಳೂರು
vishwavani.news
25.02.2019 ಸೋಮವಾರ

# ಗ್ರಂಥ ಬಿಡುಗಡೆ



ಅಂಕಣಕಾರ ಮಲ್ಲೇಪುರ ಜಿ.ವೆಂಕಟೇಶ್ ಅವರು ರಚಿಸಿದ ಲೋಕದ ಬೆಡಗು ಗ್ರಂಥವನ್ನು ಹೊರನಾಡು ಅನ್ನಪೂರ್ಣೇಶ್ವರ ದೇವಸ್ಥಾನದ ಧರ್ಮಕರ್ತ ಡಾ. ಜಿ.ಭೀಮೇಶ್ವರ ಜೋಷಿ ಬಿಡುಗಡೆ ಮಾಡಿದರು. ಗಾಂಧಿ ಸ್ಮಾರಕನಿಧಿ ಅಧ್ಯಕ್ಷ ಡಾ. ವೂಡೇ ಪಿ.ಕೃಷ್ಣ ವಿದ್ವಾಂಸ ಶತಾವಧಾನಿ ಡಾ. ಆರ್.ಗಣೇಶ್, ಲಕ್ಷ್ಮೀ ಮುದ್ರಣಾಲಯದ ಬಿ.ಆರ್.ಅಶೋಕ್ ಕುಮಾರ್ ಹಾಗೂ ನಿವೃತ್ತ ನ್ಯಾಯಮೂರ್ತಿ ಎನ್.ಕುಮಾರ್ ಇದ್ದರು.

**ವಿಶ್ವವಾಣಿ ಸುದ್ದಿಮನೆ** ಬೆಂಗಳೂರು

ಮನುಷ್ಯನ ಜೀವನ ಆದರ್ಶವಾಗಿರಬೇಕೆ ವಿನಃ ನಿದರ್ಶನವಾಗಿರಬಾರದು ಎಂದು ಹೊರನಾಡು ಅನ್ನಪೂರ್ಣೇಶ್ವರಿ ದೇವಸ್ಥಾನದ ಧರ್ಮಕರ್ತ ಡಾ. ಜಿ.ಭೀಮೇಶ್ವರ ಜೋಷಿ ತಿಳಿಸಿದರು.

ನಗರದ ಬಿ.ಪಿ ವಾಡಿಯಾ ಸಭಾಂಗಣದಲ್ಲಿ ಆಯೋಜಿಸಿದ್ದ ಸಮಾರಂಭದಲ್ಲಿ ಅಂಕಣಕಾರ ಮಲ್ಲೇಪುರ ಜಿ.ವೆಂಕಟೇಶ್ ವಿರಚಿತ 'ಲೋಕದ ಬೆಡಗು ಇಪ್ಪತ್ತೈದು ಮಹಾಸಂತರ ಲೋಕಕಥನ' ಗ್ರಂಥ ಲೋಕಾರ್ಪಣೆಗೊಳಿಸಿ ಮಾತನಾಡಿದರು.

ಮಾನವನ ಬದುಕು ಹೇಗೆ ಆದರ್ಶವಾಗಿರಬೇಕು ಎಂಬುದಕ್ಕೆ ಈ ಗ್ರಂಥ ಮಹತ್ವದ ಪುಸ್ತಕ. ಇಪ್ಪತ್ತೈದು ಮಹಾಸಂತರ ಪರಿಚಯ, ಅವರ ಜೀವನ ಎಲ್ಲರಿಗೂ ಮಾದರಿ. ನಮ್ಮೊಳಗಿನ ಕತ್ತಲು ಹೊರದೂಡಲು ಅಧ್ಯಾತ್ಮದ ಬೆಳಕಿನ ಅವಶ್ಯಕತೆ ಇದೆ.

> ಧರ್ಮದ ಬಗ್ಗೆ ಮಾತನಾಡುವವರು ಸ್ವಾರ್ಥಕ್ಕಾಗಿ ಜಾತಿ ಮಧ್ಯೆ ತಂದು ಸಮಾಜ ಹಾಗೂ ಧರ್ಮವನ್ನು ನಿಂದಿಸುವುದು ಹೆಚ್ಚಾಗಿದ್ದು, ಮೊದಲು ಅದಕ್ಕೆ ತಡೆ ಬೀಳಬೇಕು.
>
> - **ಎನ್.ಕುಮಾರ್** ನಿವೃತ್ತ ನ್ಯಾಯಮೂರ್ತಿ

ಅಧ್ಯಾತ್ಮಿಕತೆಯೂ ಪಂಚಭೂತಗಳಲ್ಲಿ ಲೀನಗೊಂಡಿದ್ದರಿಂದಲೇ ಭಾರತ ರಾಷ್ಟ್ರ ಉತ್ತಮ ಸಂತ ಸ್ಥಾನದಲ್ಲಿದೆ ಎಂದರು.

ವಿದ್ವಾಂಸ ಶತಾವಧಾನಿ ಡಾ. ಆರ್.ಗಣೇಶ ಮಾತನಾಡಿ, ಹಿಂದಿನಿಂದಲೂ ಅಧ್ಯಾತ್ಮಿಕತೆಯ ಜತೆಗೆ ದೇಶದ ಜ್ಞಾನ, ಪರಂಪರೆ ಕುರಿತು ಅನ್ಯ ಭಾಷೆಯಲ್ಲಿ ಉಲ್ಲೇಖಿಸಲಾಗಿದ್ದು, ಮಹಾಸಂತರ ಬೆಡಗು ಮೂಡಿಸುವ ಅನೇಕ ವಿಷಯಗಳು ಗ್ರಂಥದಲ್ಲಿದೆ. ಅಧ್ಯಾತ್ಮಿಕತೆಯ ಬಗ್ಗೆ ಜ್ಞಾನ ವೃದ್ಧಿಯಾಗುವಂತಹ ಗ್ರಂಥ ರಚನೆ ನಿಜಕ್ಕೂ ಶ್ಲಾಘನೀಯ ಎಂದು ಹೇಳಿದರು.

ಹೊಸ ದಿಗಂತ

ಸೋಮವಾರ
25 ಫೆಬ್ರವರಿ 2019

# ಅಂಧಕಾರ ಹೋಗಲಾಡಿಸಲು ಆಧ್ಯಾತ್ಮದ ಬೆಳಕು ಅತ್ಯಗತ್ಯ

**ದಿಗಂತ ವರದಿ, ಬೆಂಗಳೂರು**



ಅಂತರಾತ್ಮದ ಅಂಧಕಾರ ಹೋಗಲಾಡಿಸಲು ಆಧ್ಯಾತ್ಮದ ಬೆಳಕು ಅಗತ್ಯ ಎಂದು ಹೊರನಾಡು ಅನ್ನಪೂರ್ಣೇಶ್ವರಿ ದೇವಾಲಯದ ಧರ್ಮಕರ್ತ ಡಾ. ಜಿ. ಭೀಮೇಶ್ವರ ಜೋಷಿ ತಿಳಿಸಿದರು.

ಬಿಪಿ ವಾಡಿಯಾ ರಸ್ತೆಯ ಇಂಡಿಯನ್ ಇನ್ಸ್ಟಿಟ್ಯೂಟ್ ಆಫ್ ವರ್ಲ್ಡ್ ಕಲ್ಚರ್‌ನ ವಾಡಿಯಾ ಸಭಾಂಗಣದಲ್ಲಿ ಭಾನುವಾರ ಕರ್ನಾಟಕ ಸಂಸ್ಕೃತ ವಿಶ್ವವಿದ್ಯಾಲಯದ ವಿಶ್ರಾಂತ ಕುಲಪತಿ ಪ್ರೊ.ಮಲ್ಲೇಪುರಂ ವೆಂಕಟೇಶ ಅವರ 25 ಮಹಾಸಂತರ ಲೋಕಕಥನ -ಲೋಕದ ಬೆಡಗು- ಕೃತಿ ಲೋಕಾರ್ಪಣೆ ಮಾಡಿ ಮಾತನಾಡಿದ ಅವರು, ಹೊರಗಿನ ಬೆಳಕು ನೋಡಿರುವ ನಾವು ಒಳಗಿನ ಅಂಧಕಾರ ನೋಡಿಲ್ಲ. ಅದನ್ನು ಹೋಗಲಾಡಿಸಿದಾಗ ಬದುಕು ಸುಂದರವಾಗಿರುತ್ತದೆ. ಕೃತಿಯಲ್ಲಿರುವ ದಾರ್ಶನಿಕರ ಪರಿಚಯ ಪ್ರತಿಯೊಬ್ಬರಿಗೂ ಸ್ಫೂರ್ತಿ ನೀಡುತ್ತದೆ ಎಂದರು.

**ಅನ್ನಪೂರ್ಣೇಶ್ವರಿ ದೇವಾಲ ಯದ ಧರ್ಮಕರ್ತ ಡಾ. ಜಿ. ಭೀಮೇಶ್ವರ ಜೋಷಿ ಹೇಳಿಕೆ**

ಸನಾತನ ಧರ್ಮದಲ್ಲಿ ತನ್ನದೇ ಆದ ಶ್ರೇಷ್ಠತೆಯನ್ನು ಕೃತಿ ಕಾಯ್ದುಕೊಂಡು ವಜ್ರಸ್ವರೂಪಿ ರೂಪುಗೊಂಡಿದೆ. ದೃಷ್ಟಿ ಇದ್ದ ಹಾಗೆ ಸೃಷ್ಟಿ. ಅದರಿಂದ ನಾವು ನೋಡುವ ದೃಷ್ಟಿ ಅಪ್ಯಾಯಮಾನವಾಗಿರಲಿ. ಆಗ ಬದುಕು ಸುಂದರವಾಗಿ ಇರುತ್ತದೆ. ಇಲ್ಲದಿದ್ದರೆ ಬದುಕು ಸಂಕುಚಿತ ಆಗುತ್ತದೆ. ವ್ಯಕ್ತಿಯ ಬದುಕು ನಿದರ್ಶನ ಆಗಬಾರದು ಆದರ್ಶ ಆಗಬೇಕು ಎಂದು ಹೇಳಿದರು.

ಗ್ರಂಥ ಕುರಿತು ಮಾತನಾಡಿದಶತಾವಧಾನಿ ಗಣೇಶ, ಭಾರತದ ಜ್ಞಾನಪರಂಪರೆ ಒಂದೆ. ಅದನ್ನು ಬೇರೆಬೇರೆ ಭಾಷೆಯಲ್ಲಿ ಹೇಳಿದರೂ ಮೌಲ್ಯ ಮಾತ್ರಒಂದೆ. ತೋರಿಕೆಗೆ ಬೇರೆಬೇರೆ ಪಂಗಡ ಎಂಬಂತೆ ಕಂಡುಬಂದರೂ ಎಲ್ಲರೂ ಪರಿಚಯಿಸಿದ್ದು ಭಾರತದ ಸಂಸ್ಕೃತಿಯನ್ನೇ. ದೇಶದ ಆಧ್ಯಾತ್ಮಿಕ ಪರಂಪರೆಯನ್ನು ಅರ್ಥ ಮಾಡಿಕೊಂಡಿದ್ದಾರೆ. ವೇದ ಇಂದಿನ ವಿಕಿಪೀಡಿಯಾ ಇದ್ದಂತೆ ಎಂದರು.

ಅವಧೂತರ ಬೆಡಗು ಮೂಡಿಸುವ ಅಂಶ ಕೃತಿಯಲ್ಲಿದೆ. ಸನಾತನ ಧರ್ಮ ವನ್ನು ಮತ್ತೆಮತ್ತೆ ಓದಲು ಇದು ಸಹಾಯಕಾರಿಯಾಗಿದೆ.ಸಂಸ್ಕೃತದ ನಾನಾ ಪ್ರಕಾರಗಳಲ್ಲಿ ಪ್ರಬುದ್ಧತೆ ಹಾಗೂ ಉಪನಿಷತ್ತು, ಕಥೆಗಳನ್ನು ಆಧರಿಸಿ ಉನ್ನತ ಹಾಗೂ ಶ್ರೇಷ್ಠ ಪುಸ್ತಕ ರಚಿಸಿರುವ ಮಲ್ಲೇಪುರಂ ಪ್ರಯತ್ನ ಪ್ರಶಂಸನೀಯ ಎಂದರು.

ಅಧ್ಯಕ್ಷತೆ ವಹಿಸಿದ್ದ ಹೈಕೋರ್ಟ್‌ನ ನಿವೃತ್ತ ನ್ಯಾ. ಎನ್. ಕುಮಾರ್ ಮಾತನಾಡಿ, ಸಮನ್ವಯದ ಮತ್ತು ಸಾಮರಸ್ಯದ ಸಮಾಜ ಕಟ್ಟುವ ಸಾಹಿತ್ಯ ಕೊರತೆ ನಮ್ಮಲ್ಲಿದೆ.

ಇಂತಹ ಕೃತಿಗಳ ರಚಿಸುವ ಲೇಖಕರ ಕೊರತೆ ನಮ್ಮಲ್ಲಿದೆ. ಎಲ್ಲ ಮಹನೀಯರು ಧರ್ಮದ ಬಗ್ಗೆ ಮಾತನಾಡುತ್ತಾರೆ. ಅನುಕೂಲಕ್ಕೆ ತಕ್ಕಂತೆ ಜಾತಿ ತಂದು ಸಮಾಜವನ್ನು ಬೈಯುವುದು, ಧರ್ಮವನ್ನು ಬೈಯುವುದು ಹೆಚ್ಚಾಗಿದೆ. ಇದು ನಿಲ್ಲಬೇಕು. ಎಲ್ಲಾಧರ್ಮ ಸಮಾನತೆಯಿಂದ ಸಾಹಿತಿಗಳು ಕಾಣಬೇಕಿದೆ ಎಂದರು.

ಕೃತಿ ಕುರಿತು ಮಾತನಾಡಿದ ಮಲ್ಲೇಪುರಂ, ಓದುಗರ ಪ್ರೇಮ ನನ್ನನ್ನು ಶ್ರೀಮಂತಗೊಳಿಸಿದೆ. ಪ್ರತಿಯೊಂದು ಕ್ಷೇತ್ರದ ಮಹಿಮೆ ಅಲ್ಲಿನ ಮಹಾ ದಾರ್ಶನಿಕ ಶಕ್ತಿ ಪ್ರಧಾನ್ಯ ಬಗ್ಗೆ ಲೇಖನದ ಮೂಲಕ ತಿಳಿಸಿದ್ದೇನೆ ಎಂದರು.

ಸಂಯುಕ್ತ ಕರ್ನಾಟಕ
ಭಾನುವಾರ, 24, ಫೆಬ್ರವರಿ, 2019

# ಕೊ. ಚನ್ನಬಸಪ್ಪ ನಿಧನಕ್ಕೆ ಗಣ್ಯರ ಸಂತಾಪ

ಸಂ.ಕ. ಸಮಾಚಾರ ಬೆಂಗಳೂರು

ಹಿರಿಯ ಸ್ವಾತಂತ್ರ್ಯ ಹೋರಾಟಗಾರ, ಸಾಹಿತಿ ಕೊ. ಚನ್ನಬಸಪ್ಪ ಅವರ ನಿಧನಕ್ಕೆ ಮುಖ್ಯಮಂತ್ರಿ ಎಚ್.ಡಿ. ಕುಮಾರಸ್ವಾಮಿ ಸೇರಿದಂತೆ ಹಲವಾರು ಗಣ್ಯರು ಸಂತಾಪ ಸೂಚಿಸಿದ್ದಾರೆ.

ವೃತ್ತಿಯಿಂದ ವಕೀಲ, ನ್ಯಾಯಾಧೀಶರಾದರೂ ಪ್ರವೃತ್ತಿಯಿಂದ ಸಾಹಿತಿಯಾಗಿ ಕನ್ನಡ ಸಾಹಿತ್ಯಕ್ಕೆ ಕೊ. ಚನ್ನಬಸಪ್ಪ ಅವರು ನೀಡಿದ ಕೊಡುಗೆ ಅವಿಸ್ಮರಣೀಯ. ಕುವೆಂಪು ಅವರಿಗೆ ಅತಿ ಆಪ್ತರಾಗಿದ್ದ ಅವರು ಶ್ರೀ ರಾಮಾಯಣ ದರ್ಶನಂ ಮಹಾಕಾವ್ಯ ಸಮೀಕ್ಷೆ ಹಾಗೂ ಹಲವಾರು ಮಹತ್ವದ ಕೃತಿಗಳನ್ನು ರಚಿಸಿದ್ದಾರೆ. ಇವರ ನಿಧನದಿಂದ ಕನ್ನಡ ಸಾಂಸ್ಕೃತಿಕ ಲೋಕಕ್ಕೆ ತುಂಬಲಾರದ ನಷ್ಟ ಎಂದು ಮುಖ್ಯಮಂತ್ರಿಗಳು ತಮ್ಮ ಶೋಕ ಸಂದೇಶದಲ್ಲಿ ತಿಳಿಸಿದ್ದಾರೆ.

ಕೊ. ಚನ್ನಬಸಪ್ಪ ಅವರ ನಿಧನಕ್ಕೆ ಉಪ ಮುಖ್ಯಮಂತ್ರಿ ಡಾ. ಜಿ. ಪರಮೇಶ್ವರ್, ಮಾಜಿ ಪ್ರಧಾನಿ ಎಚ್.ಡಿ. ದೇವೇಗೌಡ, ಮಾಜಿ ಮುಖ್ಯಮಂತ್ರಿಗಳಾದ ಬಿ.ಎಸ್. ಯಡಿಯೂರಪ್ಪ, ಸಿದ್ದರಾಮಯ್ಯ, ಸಚಿವರಾದ ಕೃಷ್ಣಬೈರೇಗೌಡ, ಜಯಮಾಲ, ಎಚ್.ಡಿ. ರೇವಣ್ಣ, ಎಂ.ಬಿ. ಪಾಟೀಲ, ಆರ್.ವಿ. ದೇಶಪಾಂಡೆ, ಡಿ.ಕೆ. ಶಿವಕುಮಾರ್, ವಿಧಾನಪರಿಷತ್ ಸದಸ್ಯರಾದ ಯು.ಬಿ. ವೆಂಕಟೇಶ್, ಎಚ್.ಎಂ.ರೇವಣ್ಣ, ಟಿ.ಎ. ಶರವಣ, ಕೇಂದ್ರ ಸಚಿವ ಡಿ.ವಿ. ಸದಾನಂದಗೌಡ, ಸ್ವಾತಂತ್ರ್ಯ ಹೋರಾಟಗಾರ ಎಚ್.ಎಸ್. ದೊರೆಸ್ವಾಮಿ, ಕನ್ನಡ ಸಾಹಿತ್ಯ ಪರಿಷತ್ ಅಧ್ಯಕ್ಷ ಡಾ. ಮನುಬಳಿಗಾರ್, ಪದಾಧಿಕಾರಿಗಳು, ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಗೌರವಾಧ್ಯಕ್ಷ ಡಾ. ವೂಡೇ ಪಿ. ಕೃಷ್ಣ, ಗೌರವ ಕಾರ್ಯದರ್ಶಿ ಇಂದಿರಾ ಕೃಷ್ಣಪ್ಪ ಸೇರಿದಂತೆ ಅನೇಕ ಗಣ್ಯರು ಸಂತಾಪ ವ್ಯಕ್ತಪಡಿಸಿದ್ದಾರೆ.

ನಂ. 1 ಕನ್ನಡ ದಿನಪತ್ರಿಕೆ

ಭಾನುವಾರ 24 ಫೆಬ್ರವರಿ 2019
24 FEBRUARY 2019

ವಾಡಿಯಾ ಸಭಾಂಗಣದಲ್ಲಿ ಕಾರ್ಯಕ್ರಮ

# ಇಂದು ಲೋಕದ ಬೆಡಗು ಲೋಕಾರ್ಪಣೆ

ವಿಜಯವಾಣಿ ಸುದ್ದಿಜಾಲ ಬೆಂಗಳೂರು

ಕರ್ನಾಟಕ ಸಂಸ್ಕೃತ ವಿಶ್ವವಿದ್ಯಾಲಯದ ವಿಶ್ರಾಂತ ಕುಲಪತಿ ಹಾಗೂ **ವಿಜಯವಾಣಿ** ಅಂಕಣಕಾರ ಪ್ರೊ. ಮಲ್ಲೇಪುರಂ ಜಿ. ವೆಂಕಟೇಶ ಅವರ 'ಲೋಕದ ಬೆಡಗು' ಕೃತಿಯ ಲೋಕಾರ್ಪಣೆ ಕಾರ್ಯಕ್ರಮವನ್ನು ಭಾನುವಾರ (ಫೆ. 24) ಬೆಳಗ್ಗೆ 10.30ಕ್ಕೆ ಬಸವನಗುಡಿಯ ವಾಡಿಯಾ ಸಭಾಂಗಣದಲ್ಲಿ ಹಮ್ಮಿಕೊಳ್ಳಲಾಗಿದೆ.



**ಎನ್. ಕುಮಾರ್ ಸೇರಿ ಹಲವರ ಉಪಸ್ಥಿತಿ**

**ವಿಜಯವಾಣಿಯ** 'ಭವದ ಬೆಳಗು' ಅಂಕಣದಲ್ಲಿ ಪ್ರಕಟಗೊಂಡು ಓದುಗರ ಅಪಾರ ಮೆಚ್ಚುಗೆ ಗಳಿಸಿದ್ದ ಮಹಾಸಂತರ ಕುರಿತಾದ ಲೇಖನಮಾಲೆಯ 2ನೇ ಕೃತಿರೂಪ ಇದಾಗಿದೆ. ನಿವೃತ್ತ ನ್ಯಾಯಮೂರ್ತಿ ಎನ್. ಕುಮಾರ್ ಅಧ್ಯಕ್ಷತೆ ವಹಿಸಲಿದ್ದಾರೆ. ಹೊರನಾಡು ಶ್ರೀ ಅನ್ನಪೂರ್ಣೇಶ್ವರಿ ದೇವಸ್ಥಾನದ ಧರ್ಮದರ್ಶಿ ಡಾ. ಜಿ. ಭೀಮೇಶ್ವರ ಜೋಷಿ ಕೃತಿ ಲೋಕಾರ್ಪಣೆ ಮಾಡಲಿದ್ದಾರೆ. ಕರ್ನಾಟಕ ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷ ಡಾ. ವೂಡೇ ಪಿ. ಕೃಷ್ಣ ಉಪಸ್ಥಿತರಿರುವರು. ಬಹುಶ್ರುತ ವಿದ್ವಾಂಸ ಶತಾವಧಾನಿ ಡಾ. ಆರ್. ಗಣೇಶ್ ಕೃತಿ ಕುರಿತಾಗಿ ಮಾತನಾಡಲಿದ್ದಾರೆ. 'ಕರ್ನಾಟಕ ಕಲಾಶ್ರೀ' ಡಾ. ಎಂ.ಆರ್. ಸತ್ಯನಾರಾಯಣ ಅವರ ತತ್ತ್ವಪದ ಗಾಯನವೂ ಪ್ರೇಕ್ಷಕರನ್ನು ರಂಜಿಸಲಿದೆ.

## 25 ಮಹಾ ಸಂತರ ಕಥನ

**ತ**ಮ್ಮ ದಿವ್ಯ ಆಧ್ಯಾತ್ಮಿಕ ಪ್ರಭೆ, ತಾತ್ತ್ವಿಕ ಚಿಂತನೆ ಹಾಗೂ ಪವಾಡಗಳ ಮೂಲಕ ನಾಡಿನ ಶ್ರದ್ಧಾವಂತ ಭಕ್ತ ಸಮುದಾಯದಲ್ಲಿ ಅರಿವಿನ ಬೀಜವನ್ನು ಬಿತ್ತಿದ ಹಾಗೂ ಸಾಮಾಜಿಕ-ಧಾರ್ಮಿಕ ಚಟುವಟಿಕೆಗಳ ಮೂಲಕ ಸಮಾಜದ ಉದ್ಧಾರಕ್ಕಾಗಿ ಶ್ರಮಿಸಿದ ಇಪ್ಪತ್ತೈದು ಮಹಾಸಂತರ ಕಥನವನ್ನು 'ಲೋಕದ ಬೆಡಗು' ಕೃತಿ ಒಳಗೊಂಡಿದೆ. 'ಕ್ರಿಯಾಯೋಗದ ವಿಜ್ಞಾನ ಸಾರ್ವಕಾಲಿಕವಾದುದು, ಗಣಿತ ಶಾಸ್ತ್ರದಂತೆ ಖಚಿತವಾದುದು' ಎಂದ ಶ್ರೀ ಲಾಹಿರಿ ಮಹಾಶಯರು, 'ಹರಿಜನೋದ್ಧಾರ, ಸತ್ಯವೈದಿಕ ಮತಸ್ಥಾಪನೆ ನನ್ನ ಗುರಿ' ಎಂದು ಕಂಠೋಕ್ತವಾಗಿ ಹೇಳಿದ ಕಾವ್ಯಕಂಠ ಗಣಪತಿ ಮುನಿಗಳು, 'ಇಹಕ್ಕೂ ಬೆಲೆಯುಂಟು; ಇಹವಿಲ್ಲದೆ ಪರವಿಲ್ಲ' ಎನ್ನುವ ಮೂಲಕ ಅರಿವಿನ ಬೆಳಕು ಮೂಡಿಸಿದ ದಯಾನಂದ ಸರಸ್ವತಿಗಳು, 'ವೇದಾಂತಕ್ಕೆ ಆ ಜಾತಿ, ಈ ಜಾತಿ ಎಂಬ ನಿಯಮವಿಲ್ಲ; ಜ್ಞಾನಕ್ಕೆ ಸರ್ವರೂ ಅಧಿಕಾರಿಗಳೇ' ಎಂದ ರಾಜಯೋಗಿ ಚಿಕ್ಕಲಿಂಗಣ್ಣ ಸ್ವಾಮಿಗಳು, 'ಎಲ್ಲ ದೇಶಗಳೂ ಭೌತಿಕವಾಗಿ ಅಭಿವೃದ್ಧಿ ಹೊಂದಿದ್ದರೂ, ಅಂತರಂಗದಲ್ಲಿ ಅಧ್ಯಾತ್ಮ ಜ್ಞಾನವಿಲ್ಲದೆ ಸಂಕುಚಿತವಾಗಿ ಸೆಟೆದುಹೋಗಿವೆ' ಎಂದ ಸ್ವಾಮಿ ತೀರ್ಥರು ಹೀಗೆ ನಾಡಿನ ಸಂತ-ಮಹಾಂತರ ಮಹೋನ್ನತ ಬದುಕಿನ ವೃತ್ತಾಂತವನ್ನು ಕಟ್ಟಿಕೊಟ್ಟಿರುವ ಮಲ್ಲೇಪುರಂ ಜಿ. ವೆಂಕಟೇಶ ಅವರ ಈ ಕೃತಿ ಸಂಗ್ರಹಯೋಗ್ಯವಾಗಿದೆ.



ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ವರ್ಲ್ಡ್ ಕಲ್ಚರ್‌ನಲ್ಲಿ ನಡೆದ ಕಾರ್ಯಕ್ರಮದಲ್ಲಿ ಮಲ್ಲೇಪುರಂ ಜಿ.ವೆಂಕಟೇಶ್ ಅವರ ಲೋಕದ ಬೆಡಗು ಗ್ರಂಥ ಲೋಕಾರ್ಪಣೆ ಮಾಡಲಾಯಿತು. ಗಾಂಧಿ ಸ್ಮಾರಕ ನಿಧಿಯ ಡಾ.ವೂಡೇ ಪಿ.ಕೃಷ್ಣ, ಶತಾವಧಾನಿ ಆರ್.ಗಣೇಶ್ ಮತ್ತಿತರರು ಪಾಲ್ಗೊಂಡಿದ್ದರು.

ಸಂಯುಕ್ತ ಕರ್ನಾಟಕ

ಭಾನುವಾರ, 17, ಫೆಬ್ರವರಿ, 2019

# ದೇಶದ ಸಮಸ್ಯೆಗಳಿಗೆ ಗಾಂಧಿ ತತ್ವಗಳೇ ಉತ್ತರ

ಸಂ.ಕ. ಸಮಾಚಾರ ಬೆಂಗಳೂರು

ದೇಶದಲ್ಲಿರುವ ಭ್ರಷ್ಟಾಚಾರ, ಜಾತಿಯತೆ, ಬಡತನ, ಭಯೋತ್ಪಾದನೆಯನ್ನು ಗಾಂಧಿ ವಿಚಾರಗಳಿಂದ ಮಾತ್ರ ನಿವಾರಿಸಲು ಸಾಧ್ಯ ಎಂದು ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ "ಡಾ. ವೊಡೇ ಪಿ. ಕೃಷ್ಣ" ಅಭಿಪ್ರಾಯಪಟ್ಟರು.

ಗಾಂಧಿ ಭವನದಲ್ಲಿ ವಿವಿಧ ಸಂಸ್ಥೆಗಳು ಆಯೋಜಿಸಿದ್ದ ಭೂದಾನ ಚಳುವಳಿಯ ಹರಿಕಾರ ಸಂತ ವಿನೋಬಾ ಭಾವೆ 125 ಕಾರ್ಯಕ್ರಮದಲ್ಲಿ ಮಾತನಾಡಿದ ಅವರು, ಗಾಂಧೀಜಿಯವರ ತತ್ವಗಳ ಅನುಷ್ಠಾನದ ಮೂಲಕ ವಿನೋಬಾ ಭಾವೆ ಅವರು ಸಾವಿರಾರು ಮೈಲಿ ಪಾದಯಾತ್ರೆ ಮೂಲಕ ಉಳ್ಳವರು ಬಡವರಿಗೆ ಹೃದಯಪೂರ್ವಕವಾಗಿ ಭೂಮಿ ನೀಡುವಂತೆ ಮಾಡಿದರು ಎಂದರು.

ಗಾಂಧೀಜಿಯವರಿಗೆ ಗೀತಾ ಪಾಠವನ್ನು ಹೇಳುತ್ತಿದ್ದ ವಿನೋಬಾ ಭಾವೆ ಅವರು, ಆಧ್ಯಾತ್ಮ ಇಲ್ಲದೆ ವಿಜ್ಞಾನ ಇಲ್ಲ ಎಂದು ನಂಬಿದ್ದರು. ಗಾಂಧೀಜಿಯವರ ವಿಚಾರಧಾರೆ ಪ್ರವರ್ತಕರಾಗಿದ್ದ ಅವರು ಸಮಾಜ ಕಲ್ಯಾಣಕ್ಕಾಗಿ ಸರಳ ಜೀವನ ಅನುಸರಿಸಿ ದೇಶದಲ್ಲಿ 6 ಆಶ್ರಮಗಳನ್ನು ಸ್ಥಾಪಿಸಿದ್ದರು. 24 ಭಾಷೆಗಳನ್ನು ಬಲ್ಲವರಾಗಿದ್ದ ವಿನೋಬಾ ಭಾವೆ ಅವರು ದೇಶಕ್ಕೆ ಒಂದೇ ಭಾಷೆ ಇರಬೇಕು ಎಂದು ಪ್ರತಿಪಾದಿಸಿದ್ದರು. ಕನ್ನಡ ಭಾಷೆ ಓದಲು ಸುಲಭ ಸರಳ ಎಂದಿದ್ದ ಅವರು, ಕನ್ನಡ ಭಾಷೆಯ ಬಗ್ಗೆ ಅಪಾರ ಒಲವು ಹೊಂದಿದ್ದರು ಎಂದರು.

ವಾರ್ಧಾ ಬ್ರಹ್ಮ ವಿದ್ಯಾಮಂದಿರದ ಟ್ರಸ್ಟಿ ಗೌತಮ್ ಬಜಾಜ್ ಮಾತನಾಡಿ ವೈಚಾರಿಕ ಜೀವನವನ್ನು ಮೈಗೂಡಿಸಿಕೊಳ್ಳಲು ವಿದ್ಯಾರ್ಥಿಗಳು ವಿನೋಬಾ ಭಾವೆ ಹಾಗೂ ಗಾಂಧೀಜಿಯವರ ಜೀವನದ ಮೌಲ್ಯಗಳನ್ನು ತಿಳಿದುಕೊಳ್ಳಬೇಕಾಗಿದ್ದು, ಶಿಕ್ಷಣ ಮುಗಿದ ತಕ್ಷಣ ಕೆಲಸ ಹುಡುಕದೆ ಒಂದು ವರ್ಷ ದೇಶ ಸುತ್ತಬೇಕು ಇದರಿಂದ ದೇಶದ ಸಮಸ್ಯೆಗಳನ್ನು ತಿಳಿಯಬಹುದು ಎಂದು ಹೇಳಿದರು.

ಕಾರ್ಯಕ್ರಮದಲ್ಲಿ ಬ್ರಹ್ಮ ವಿದ್ಯಾಮಂದಿರದ ಸಂಸ್ಥಾಪಕಿ ಸುಶ್ರೀ ಉಷಾ ಜೆ. ವೋರಾ, ಶ್ರೀ ಕೃಷ್ಣ ಸಮೂಹ ವಿದ್ಯಾ ಸಂಸ್ಥೆಗಳ ಅಧ್ಯಕ್ಷ ಡಾ. ಎಂ. ರುಕ್ಮಾಂಗದ ಗಾಂಧಿ ಸ್ಮಾರಕ ನಿಧಿ ಕಾರ್ಯದರ್ಶಿ ಇಂದಿರಾ ಕೃಷ್ಣಪ್ಪ ಸೇರಿದಂತೆ ಇನ್ನಿತರಿದ್ದರು.

ಸಂಜೆ ವಾಣಿ

ಶನಿವಾರ, 16 ಫೆಬ್ರವರಿ 2019



ಗಾಂಧಿ ಭವನದಲ್ಲಿ ಇಂದು ನಡೆದ ಭೂದಾನ ಚುಳುವಳಿಯ ಹರಿಕಾರ ಆಚಾರ್ಯ ವಿನೋಬಾ ಭಾವೆ ಅವರ 125ನೇ ಜನ್ಮದಿನಾಚರಣೆ. ಕಾರ್ಯಕ್ರಮದಲ್ಲಿ ಗೌತಮ್ ಬಜಾಜ್, ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ಡಾ.ವೂಡೇ ಪಿ .ಕೃಷ್ಣ, ಗೌರವ ಕಾರ್ಯದರ್ಶಿ ಇಂದಿರಾ ಕೃಷ್ಣಪ್ಪ ಮತ್ತಿತರರು ಇದ್ದಾರೆ.

# ಇಂದಿನ ಆಮಂತ್ರಣ

## ವಿಜಯವಾಣಿ
ಶನಿವಾರ 16 ಫೆಬ್ರವರಿ 2019
16 FEBRUARY 2019

ಪುಕರ



» ವಿನೋಬಾ ಭಾವೆ-125: ಕರ್ನಾಟಕ ಗಾಂಧೀ ಸ್ಮಾರಕ ನಿಧಿ ಆಯೋಜನೆ. ಸಹಯೋಗ: ವಿಶ್ವನೀಡಂ ಟ್ರಸ್ಟ್, ಶ್ರೀ ಕೃಷ್ಣ ಸಮೂಹ ವಿದ್ಯಾಸಂಸ್ಥೆಗಳು, ಗಾಂಧಿಶಾಂತಿ ಪ್ರತಿಷ್ಠಾನ, ಸರ್ವೋದಯ ಮಂಡಲ, ರಾಷ್ಟ್ರೀಯ ಸೇವಾ ಯೋಜನೆ, ಯುವ ಸಬಲೀಕರಣ ಇಲಾಖೆ. ಭೂದಾನ ಚಳವಳಿ ಹರಿಕಾರ ವಿನೋಬಾ ಭಾವೆ-125: ಉದ್ಘಾಟನೆ: ವಾರ್ಧಾ ಬ್ರಹ್ಮ ವಿದ್ಯಾಮಂದಿರ ಟ್ರಸ್ಟಿ ಗೌತಮ್ ಬಜಾಜ್. ಅಧ್ಯಕ್ಷತೆ: ಕರ್ನಾಟಕ ಗಾಂಧೀ ಸ್ಮಾರಕ ನಿಧಿ ಅಧ್ಯಕ್ಷ ಡಾ. ವೂಡೇ ಪಿ. ಕೃಷ್ಣ. ಮುಖ್ಯ ಅತಿಥಿಗಳು: ಯುವ ಸಬಲೀಕರಣ ಇಲಾಖೆ ರಾಷ್ಟ್ರೀಯ ಸೇವಾ ಯೋಜನೆ ರಾಜ್ಯ ಸಂಪರ್ಕಾಧಿಕಾರಿ ಡಾ. ಗಣನಾಥ ಶೆಟ್ಟಿ ಎಕ್ಕಾರು, ಬ್ರಹ್ಮ ವಿದ್ಯಾಮಂದಿರದ (ವಾರ್ಧಾ) ಸಂಸ್ಥಾಪಕ ಸದಸ್ಯೆ ಉಷಾ ಜೆ. ವೋರಾ, ವಿಶ್ವನೀಡಂ ಟ್ರಸ್ಟ್ ಅಧ್ಯಕ್ಷೆ ಸವಿತಾ ಭಟ್, ಶ್ರೀ ಕೃಷ್ಣ ಸಮೂಹ ವಿದ್ಯಾ ಸಂಸ್ಥೆಗಳ ಅಧ್ಯಕ್ಷ ಡಾ. ಎಂ. ರುಕ್ಮಾಂಗದ ನಾಯ್ಡು. ಸ್ಥಳ: ಕಸ್ತೂರಬಾ ಸಭಾಂಗಣ, ಗಾಂಧಿಭವನ, ಕುಮಾರಕೃಪಾ ರಸ್ತೆ. ಬೆಳಗ್ಗೆ 11ಕ್ಕೆ.

## ವಿಜಯ ಕರ್ನಾಟಕ
ಶನಿವಾರ, 16 ಫೆಬ್ರವರಿ 2019



ಕರ್ನಾಟಕ ಗಾಂಧಿ ಸ್ಮಾರಕ ನಿಧಿ: ಭೂದಾನ ಚಳವಳಿಯ ಹರಿಕಾರ ಸಂತ ವಿನೋಬಾ ಭಾವೆ-125 ಕಾರ್ಯಕ್ರಮ. ಉದ್ಘಾಟನೆ: ವಾರ್ಧಾ ಬ್ರಹ್ಮ ವಿದ್ಯಾಮಂದಿರ ಟ್ರಸ್ಟಿ ಗೌತಮ್ ಬಜಾಜ್. ಅಧ್ಯಕ್ಷತೆ: ಕರ್ನಾಟಕ ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷ ಡಾ. ವೂಡೆ ಪಿ. ಕೃಷ್ಣ. ಸ್ಥಳ: ಕಸ್ತೂರಬಾ ಸಭಾಂಗಣ, ಗಾಂಧಿ ಭವನ, ಕುಮಾರಕೃಪಾ ರಸ್ತೆ. 11.00

## ಸಂಯುಕ್ತ ಕರ್ನಾಟಕ
ಶನಿವಾರ | 16 | ಫೆಬ್ರವರಿ | 2019

ಗಾಂಧಿಭವನ, ಕಸ್ತೂರ್‌ಬಾ ಸಭಾಂಗಣ, ಕರ್ನಾಟಕ ಗಾಂಧೀ ಸ್ಮಾರಕ ನಿಧಿ ವತಿಯಿಂದ 'ಭೂದಾನ ಚಳವಳಿಯ ಹರಿಕಾರ ಸಂತ ವಿನೋಬಾ ಭಾವೆ 125' ಕಾರ್ಯಕ್ರಮ. ಉದ್ಘಾಟನೆ: ಗೌತಮ್ ಬಜಾಜ್. ಅಧ್ಯಕ್ಷತೆ: ಡಾ. ವೂಡೆ ಪಿ. ಕೃಷ್ಣ. ಬೆಳಗ್ಗೆ 11.00.

## ಉದಯವಾಣಿ
ಶನಿವಾರ, ಫೆಬ್ರವರಿ 16, 2019

■ ಕರ್ನಾಟಕ ಗಾಂಧೀ ಸ್ಮಾರಕ ನಿಧಿ: ಭೂದಾನ ಚಳವಳಿಯ ಹರಿಕಾರ ಸಂತ ವಿನೋಬಾ ಭಾವೆ 125 ಜಯಂತಿ. ಉದ್ಘಾಟನೆ: ಬ್ರಹ್ಮ ವಿದ್ಯಾಮಂದಿರದ ಟ್ರಸ್ಟಿ ಗೌತಮ್ ಬಜಾಜ್. ಮುಖ್ಯ ಅತಿಥಿಗಳು: ರಾಷ್ಟ್ರೀಯ ಸೇವಾ ಯೋಜನೆಯ ರಾಜ್ಯ ಸಂಪರ್ಕಾಧಿಕಾರಿ ಡಾ. ಗಣಪತಿ ಶೆಟ್ಟಿ ಎಕ್ಕಾರು. ಸ್ಥಳ: ಕಸ್ತೂರಬಾ ಸಭಾಂಗಣ, ಗಾಂಧೀ ಭವನ. ಬೆಳಗ್ಗೆ 11.

## ಪ್ರಜಾವಾಣಿ
ಶನಿವಾರ • ಫೆಬ್ರುವರಿ 16, 2019

ವಿನೋಬಾ ಭಾವೆ 125ನೇ ವರ್ಷಾಚರಣೆ: ಉದ್ಘಾಟನೆ- ಗೌತಮ್ ಭಜಾಜ್. ಅತಿಥಿ- ಗಣನಾಥ ಶೆಟ್ಟಿ ಎಕ್ಕಾರು, ಉಷಾ ಜೆ.ವೋರಾ, ಸವಿತಾ ಭಟ್, ಎಂ.ರುಕ್ಮಾಂಗದ ನಾಯ್ಡು, ಬೇರಿಗೆ ಲೋಕೇಶ್. ಅಧ್ಯಕ್ಷತೆ- ವೂಡೆ ಪಿ.ಕೃಷ್ಣ, ಆಯೋಜನೆ, ಸ್ಥಳ- ಕರ್ನಾಟಕ ಗಾಂಧಿ ಸ್ಮಾರಕ ನಿಧಿ, ಕಸ್ತೂರ್‌ಬಾ ಸಭಾಂಗಣ, ಗಾಂಧಿ ಭವನ, ಕುಮಾರಪಾರ್ಕ್. ಬೆಳಿಗ್ಗೆ 11

## DECCAN HERALD
Saturday, February 16, 2019

**Karnataka Gandhi Smaraka Nidhi:** 'Bhoodana Chaluvali Harikara-Santha Vinobha Bhave 125'; Kasturba Auditorium, Gandhi Bhavan, Kumara Park East; 11 am

ಈ ಸಂಜೆ

ಶನಿವಾರ:- 16-2-2019



ಕರ್ನಾಟಕ ಗಾಂಧಿ ಸ್ಮಾರಕ ನಿಧಿ ವಿಶ್ವನೀಡಂ ಟ್ರಸ್ಟ್, ಶ್ರೀಕೃಷ್ಣ ಸಮೂಹ ವಿದ್ಯಾಸಂಸ್ಥೆಗಳು, ರಾಷ್ಟ್ರೀಯ ಸೇವಾ ಯೋಜನೆ, ಗಾಂಧಿ ಶಾಂತಿ ಪ್ರತಿಷ್ಠಾನ, ಯುವ ಸಬಲೀಕರಣ ಇಲಾಖೆ ಸಂಯುಕ್ತಾಶ್ರಯದಲ್ಲಿ ಗಾಂಧಿಭವನದಲ್ಲಿಂದು ಹಮ್ಮಿಕೊಂಡಿದ್ದ ಭೂದಾನ ಚಳವಳಿಯ ಹರಿಕಾರ ಸಂತ ವಿನೋಬಾ ಭಾವೆ ಅವರ 125ನೇ ಕಾರ್ಯಕ್ರಮದಲ್ಲಿ ಸ್ಮಾರಕ ನಿಧಿ ಅಧ್ಯಕ್ಷ ಡಾ. ವೂಡೇ ಪಿ. ಕೃಷ್ಣ, ಟ್ರಸ್ಟಿ ಗೌತಮ್ ಬಜಾಜ್, ಉಷಾ ಜೆ. ವೋರಾ, ಡಾ. ಎಂ. ರುಕ್ಮಾಂಗದ ನಾಯ್ಡು, ಜೀರಿಗೆ ಲೋಕೇಶ್, ಲ. ನರಸಿಂಹಯ್ಯ, ಗಿರಿಜಾ ಹೆಗಡೆ, ಗಂಗಲ[illegible] ಮತ್ತಿತರರಿದ್ದರು.

# 189ನೇ ಮಾಘೋತ್ಸವದಲ್ಲಿ ನ್ಯಾಯವಾದಿ ನಿಮಿಷಕುಮಾರ್ ಅವರಿಂದ ವಿಚಾರಪೂರ್ಣ ಉಪನ್ಯಾಸ

ಅರಳೇಪೇಟೆ ಮತ್ತು ಬಸವನಗುಡಿ ಬ್ರಹ್ಮಸಮಾಜಗಳ ಸಹಯೋಗದೊಂದಿಗೆ ಬೆಂಗಳೂರು ಬ್ರಹ್ಮಸಮಾಜ 27-1-2019ರಂದು ಬೆಂಗಳೂರಿನ ಗಂಗಾಧರ ಚೆಟ್ಟಿ ಸ್ಟ್ರೀಟ್‌ನಲ್ಲಿರುವ ಬ್ರಹ್ಮ ಮಂದಿರದಲ್ಲಿ ಏರ್ಪಡಿಸಿದ್ದ 189ನೇ ಮಾಘೋತ್ಸವ (ಬ್ರಹ್ಮಸಮಾಜ ಸ್ಥಾಪನಾ ದಿನ) ಕಾರ್ಯಕ್ರಮದಲ್ಲಿ ಮುಖ್ಯ ಅತಿಥಿಯಾಗಿದ್ದ ಬೆಂಗಳೂರಿನ ವಕೀಲರಾದ ನಿಮಿಷಕುಮಾರ್ "ಬ್ರಹ್ಮೋ ಕುಟುಂಬವೊಂದರಲ್ಲಿ ಬೆಳೆಯುವುದು" ಕುರಿತು ವಿಚಾರ ಪೂರ್ಣ ಉಪನ್ಯಾಸ ನೀಡಿದರು. "ಶಿಕ್ಷಣ ತಜ್ಞ ಡಾ.ವೂಡೇ ಪಿ.ಕೃಷ್ಣ"ನಿರೂಪಿಸಿದ ಕಾರ್ಯಕ್ರಮ ಅರುಂಧತಿ ರಾಯ್, ಸುರೋಜಿತ್ ರಾಯ್, ಎಂ.ಕೆ.ಘೋಷ್, ತಪೋಜಿತ್ ರಾಯ್ ಮತ್ತಿತರರ ಬ್ರಹ್ಮೋ ಸಂಗೀತದಿಂದ ಆರಂಭವಾಯಿತು. ಡಬ್ಲ್ಯೂ. ಆರ್. ಹರ್ಷ ಸ್ವಾಗತಿಸಿದರು.

ಬೆಂಗಳೂರು ಬ್ರಹ್ಮ ಸಮಾಜದ ಜಂಟಿ ಕಾರ್ಯದರ್ಶಿ ಆರ್. ಜ್ಯೋತಿರ್ಮಯ್ ತಮ್ಮ ಉಪಾಸನಾ ಕಾರ್ಯಕ್ರಮದ ಮೂಲಕ ಎಲ್ಲಾ ನೀಡಿರುವ ಭಗವಂತನಿಗೆ ಕೃತಜ್ಞತೆಗಳನ್ನು ಸಮರ್ಪಿಸಿದರು.

"ನಾನು ಹುಟ್ಟಿನಿಂದಲೇ ಬ್ರಹ್ಮೋಧರ್ಮದಲ್ಲಿ ಬೆಳೆದೆ. ಬಾಲ್ಯದಲ್ಲಿ ನನಗೆ ಭಾರತದಲ್ಲಿ ಇಷ್ಟೊಂದು ಧರ್ಮಗಳಿರುವುದು ಗೊತ್ತಿರಲಿಲ್ಲ. 1994ರಲ್ಲಿ ಅಯೋಧ್ಯೆಯಲ್ಲಿ ಬಾಬರಿ ಮಸೀದಿ ನೆಲಸಮವಾದಾಗಲೇ ಧರ್ಮ ಧರ್ಮಗಳ ನಡುವೆ ಇಷ್ಟೊಂದು ವೈಷಮ್ಯವಿರುವುದು ನನ್ನ ಅರಿವಿಗೆ ಬಂತು. ನಾನು ಲಾಯರ್ ಆದಾಗ ನೀನು ಯಾವ ಜಾತಿ ಎಂದು ಕೆಲವು ಹಿರಿಯ ವಕೀಲರು ಕೇಳಿದಾಗ ನನ್ನದು ಮನಷ್ಯ ಜಾತಿ ಎಂದು ಧೈರ್ಯವಾಗಿ ಹೇಳಿದೆ. ನನ್ನ ವಿವಾಹ ಸಂದರ್ಭದಲ್ಲಿ ಬ್ರಹ್ಮೋ ಧರ್ಮ ಅಧಿಕೃತ ದಾಖಲೆಗಳಲ್ಲಿ ಇಲ್ಲದಿದ್ದುದರಿಂದ ಸಬ್‌ರಜಿಸ್ಟ್ರಾರ್ ಕಛೇರಿಯಲ್ಲಿ ವಿಶೇಷ ವಿವಾಹ ಕಾಯ್ದೆಯಡಿಯಲ್ಲಿ ನೋಂದಣಿ ಮಾಡಿಸಿಕೊಂಡು ಅನಂತರ ಬ್ರಹ್ಮ ಸಮಾಜದಲ್ಲಿ ಅತ್ಯಂತ ಸರಳ ರೀತಿಯಲ್ಲಿ ವಿವಾಹವಾದೆ. ಮಾನವ ಸೇವೆಯೇ ಭಗವಂತನ ಸೇವೆ ಎಂಬುದೇ ಬ್ರಹ್ಮೋ ಧರ್ಮದ ಧ್ಯೇಯ. ಸಹ ಮಾನವರಷ್ಟೇ ಅಲ್ಲ, ಪ್ರಾಣಿ ಪಕ್ಷಿಗಳ ಮತ್ತು ಸಸ್ಯಗಳ ಬಗೆಗೂ ಕರುಣೆ ಇರಬೇಕು. ವರ್ಣ, ವರ್ಗಗಳ ಆಧಾರದಲ್ಲಿ ಭೇದ ಮಾಡಬಾರದು, ಜಾತ್ಯತೀತ ಮನೋಧರ್ಮ ಬೆಳಸಿಕೊಳ್ಳಬೇಕು. ಮೌಢ್ಯಾಚರಣೆಗಳನ್ನು ಪ್ರೋತ್ಸಾಹಿಸಬಾರದು. ಶಾಂತಿ ಮತ್ತು ಭ್ರಾತೃತ್ವದ ಸಂದೇಶವನ್ನು ಎಲ್ಲೆಡೆ ಬಿತ್ತರಿಸಬೇಕು. ಅತ್ಯಂತ ಸರಳ ಜೀವನ ನಡೆಸಬೇಕು, ಸಮಾಜದಿಂದ ಎಲ್ಲವನ್ನೂ ಪಡೆದಿರುವ ನಾವು ಸಮಾಜದ ಋಣ ತೀರಿಸಲೇ ಬೇಕು. ವಿಗ್ರಹಾರಾಧನೆಗೆ ಬ್ರಹ್ಮೋಧರ್ಮದಲ್ಲಿ ಅವಕಾಶವಿಲ್ಲ. ಏಕದೇವೋಪಾಸನೆ ತತ್ವ ಪಾಲಿಸಬೇಕು" ಎಂದು ತಮ್ಮ ಉಪನ್ಯಾಸದಲ್ಲಿ ತಿಳಿಸಿದ ನಿಮಿಷಕುಮಾರ್ "ಬ್ರಹ್ಮೋ ಎಂದರೆ ಏನು ಎಂದು ಈಗಲೂ ಕೆಲವರು ಆಶ್ಚರ್ಯ ವ್ಯಕ್ತಪಡಿಸುತ್ತಾರೆ. ಹೀಗಾಗಿ, ಬ್ರಹ್ಮೋ ಧರ್ಮ ಬೆಳೆಯಬೇಕಾದಷ್ಟು ಬೆಳೆದಿಲ್ಲ. ಈ ಬಗೆಗೆ ಬ್ರಹ್ಮೋಪರ ಚಿಂತಕರು ಗಮನ ಹರಿಸಬೇಕು" ಎಂಬ ತಮ್ಮ ಆಶಯ ವ್ಯಕ್ತಪಡಿಸಿದರು.

ಡಬ್ಲ್ಯೂ ಪಿ. ಅಶೋಕ್ ಅವರ ವಂದನಾರ್ಪಣೆಯ ನಂತರ ಅತಿಥಿ ಅಭ್ಯಾಗತರಿಗೆಲ್ಲಾ ವೂಡೇ ಪ್ರತಿಷ್ಠಾನದವರು ಪ್ರೀತಿ ಭೋಜನದ ವ್ಯವಸ್ಥೆ ಮಾಡಿದ್ದರು. ಬ್ರಹ್ಮ ಸಮಾಜದ ಹಿರಿಯ ಸದಸ್ಯರಾದ ಸಿ.ಎನ್.ಎನ್. ರಾಜು ಮತ್ತಿತರರು ಉಪಸ್ಥಿತರಿದ್ದರು.

ಕರ್ನಾಟಕ

ಭಾನುವಾರ,3 ಫೆಬ್ರವರಿ 2019, ಬೆಂಗಳೂರು

## ಸಮ್ಮೇಳನಾಧ್ಯಕ್ಷೆ ಸುಶೀಲಮ್ಮ ಒತ್ತಾಯ

# ಎಲ್ಲ ಕ್ಷೇತ್ರಗಳಲ್ಲಿ ಕನ್ನಡ ಭವನ ನಿರ್ಮಿಸಿ

**ವಿಕಸುದ್ದಿಲೋಕ ಹೆಬ್ಬಾಳ**

ಕನ್ನಡ ಭಾಷೆ ಹಾಗೂ ಸಂಸ್ಕೃತಿಯ ಅಭಿವೃದ್ಧಿಗಾಗಿ ನಗರದ 28 ವಿಧಾನಸಭಾ ಕ್ಷೇತ್ರಗಳಲ್ಲಿ ಕನ್ನಡ ಭವನ ನಿರ್ಮಾಣ ಮಾಡಬೇಕು ಎಂದು ಸುಮಂಗಲಿ ಸೇವಾಶ್ರಮದ ಅಧ್ಯಕ್ಷೆ ಸುಶೀಲಮ್ಮ ಒತ್ತಾಯಿಸಿದರು.

ಹೆಬ್ಬಾಳ ವಿಧಾನಸಭಾ ಕ್ಷೇತ್ರ ಘಟಕದ ಎರಡನೇ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆ ವಹಿಸಿ ಮಾತನಾಡಿದ ಅವರು ''ಒಂದರಿಂದ ಏಳನೇ ತರಗತಿವರೆಗೆ ಕನ್ನಡ ಕಡ್ಡಾಯವಾಗಲೇಬೇಕು. ಕೆಲವು ಕನ್ನಡ ಶಾಲೆಯನ್ನು ಮಕ್ಕಳ ಕೊರತೆ ಕಾರಣ ಮುಚ್ಚಬೇಕಾದ ಸನ್ನಿವೇಶ ಎದುರಾಗಿದೆ. ಆಶ್ರಮ ಶಾಲೆಯಲ್ಲಿ ಹಿಂದೆ 450ಕ್ಕೂ ಹೆಚ್ಚು ಮಕ್ಕಳಿದ್ದರು. ಈಗ ಮಕ್ಕಳ ಕೊರತೆಯಿಂದ ಮುಚ್ಚಲಾಗಿದೆ. ಜನ ಪ್ರತಿನಿಧಿಗಳ ಇಚ್ಛಾಶಕ್ತಿಯ ಕೊರತೆಯಿಂದಾಗಿ ಕನ್ನಡ ಅಳಿವಿನಂಚಿಗೆ ಹೋಗುತ್ತಿದೆ. ಆದರೆ, ಕನ್ನಡಪರ ಸಂಘಟನೆಗಳು ಈ ನಿಟ್ಟಿನಲ್ಲಿ ಹೆಚ್ಚು ಕಾರ್ಯಕ್ರಮಗಳನ್ನು ಮಾಡುತ್ತಿವೆ,'' ಎಂದರು.

ಶಾಸಕ ಬೈರತಿ ಎಸ್.ಸುರೇಶ ಮಾತನಾಡಿ ''ಸಾಹಿತ್ಯ ಸಮ್ಮೇಳನಗಳ ಮೂಲಕ ಜನರಲ್ಲಿ ಭಾಷೆಯ ಕುರಿತು ಜಾಗೃತಿ ಮೂಡಿಸಲು ಸಾಧ್ಯವಿದೆ. ನಗರದಲ್ಲಿ ಶೇ. 70ಕ್ಕೂ ಅಧಿಕ ಅನ್ಯ ಭಾಷಿಕರು ಇದ್ದಾರೆ. ಹೀಗಾಗಿ ಕನ್ನಡಿಗರು ಅಲ್ಪ ಸಂಖ್ಯಾತರಾಗುತ್ತಿದ್ದಾರೆ. ಹೀಗಾಗಿ ಸರಕಾರದಿಂದ ಮಾತ್ರ ಕನ್ನಡ ಉಳಿವು ಸಾಧ್ಯವಿಲ್ಲ. ಮನೆಯಂಗಳದಿಂದಲೇ ಭಾಷೆ ಬೆಳೆಯಬೇಕು,'' ಎಂದರು.

ಈ ವೇಳೆ ಅವರು ''ಕ್ಷೇತ್ರದಲ್ಲಿ ಕನ್ನಡ ಭವನ ನಿರ್ಮಾಣಕ್ಕೆ ಜಾಗ ಒದಗಿಸಲಾಗುವುದು,'' ಎಂದರು.

ಪಾಲಿಕೆ ಸದಸ್ಯ ಆನಂದ ಕುಮಾರ ಅವರು ಕ್ಯಾಲೆಂಡರ್ ಬಿಡುಗಡೆ ಮಾಡಿದರು. ಘಟಕದ ಅಧ್ಯಕ್ಷ ಅಶೋಕ ಕುಮಾರ ಮಾತನಾಡಿದರು.

ಇದೇ ವೇಳೆ ಪ್ರೊ. ಎಸ್ ಜಿ ಸಿದ್ದರಾಮಯ್ಯ,ಡಾ. ಉಷಾದೇವಿ ಸೇರಿದಂತೆ ಸುಮಾರು 20ಕ್ಕೂ ಅಧಿಕ ಸಾಧಕರನ್ನು ಸನ್ಮಾನಿಸಲಾಯಿತು.



ಹೆಬ್ಬಾಳ ಕ್ಷೇತ್ರ ಘಟಕದ ಎರಡನೇ ಸಾಹಿತ್ಯ ಸಮ್ಮೇಳನವನ್ನು ಶಾಸಕ ಬೈರತಿ ಸುರೇಶ್ ಉದ್ಘಾಟಿಸಿದರು. ಸಮ್ಮೇಳನಾಧ್ಯಕ್ಷೆ ಸುಶೀಲಮ್ಮ ಮತ್ತಿತರರಿದ್ದರು.

03-02-2019



ಬೆಂಗಳೂರಿನ ಶೇಷಾದ್ರಿಪುರಂ ಸಮೂಹ ಸಂಸ್ಥೆ ಮಾಜಿ ಅಧ್ಯಕ್ಷ ದಿ.ಕೆ.ಎಂ.ನಂಜಪ್ಪನವರ ಜನ್ಮ ದಿನದ ಪ್ರಯುಕ್ತ ಶೇಷಾದ್ರಿಪುರಂ ಕಾಮರ್ಸ್ ಕಾಲೇಜಿನಲ್ಲಿ ಹಮ್ಮಿಕೊಂಡಿದ್ದ ರಕ್ತದಾನ ಶಿಬಿರವನ್ನು ಸಂಸ್ಥೆಯ ಕಾರ್ಯದರ್ಶಿ ಡಾ.ವೂಡೇ.ಪಿ.ಕೃಷ್ಣ ಉದ್ಘಾಟಿಸಿದರು. ರೆಡ್‌ಕ್ರಾಸ್ ಸಂಸ್ಥೆಯ ರಾಜು ಚಂದ್ರಶೇಖರ್, ಡಿ.ಉಮಾಶಂಕರ್, ದೀಪಕ್, ಪ್ರಾಂಶುಪಾಲರಾದ ಡಾ.ಆರ್.ಮಂಜುನಾಥ್, ವೈ.ಆರ್.ಸಿ. ಸಂಯೋಜನಾಧಿಕಾರಿ ಡಾ.ಎಸ್.ವಿ.ಪ್ರದೀಪ್ ಕುಮಾರ್ ಉಪಸ್ಥಿತರಿದ್ದರು.

ಕನ್ನಡಪ್ರಭ ಶುಕ್ರವಾರ 1.2.2019



ಶೇಷಾದ್ರಿಪುರ ಸಮೂಹ ಸಂಸ್ಥೆ ಮಾಜಿ ಅಧ್ಯಕ್ಷ ದಿವಂಗತ ಕೆ.ಎಂ. ನಂಜಪ್ಪನವರ 107ನೇ ಜನ್ಮದಿನದ ಪ್ರಯುಕ್ತ ಹಮ್ಮಿಕೊಂಡಿದ್ದ 'ಬೃಹತ್ ರಕ್ತದಾನ ಮೇಳ'ದಲ್ಲಿ ವಿದ್ಯಾರ್ಥಿಗಳು ರಕ್ತದಾನ ಮಾಡಿದರು.

ಹೊಸ ದಿಗಂತ
ಶುಕ್ರವಾರ,1 ಫೆಬ್ರವರಿ 2019, ಬೆಂಗಳೂರು

# ಸ್ವಯಂಪ್ರೇರಿತ ಬೃಹತ್ ರಕ್ತದಾನ ಮೇಳ

**ಬೆಂಗಳೂರು:** ನಗರದ ಶೇಷಾದ್ರಿಪುರ ಕಾಲೇಜಿನಲ್ಲಿ ಗುರುವಾರ ಶೇಷಾದ್ರಿಪುರ ಸಮೂಹ ಸಂಸ್ಥೆ ವತಿಯಿಂದ ಆಯೋಜಿಸಿದ್ದ ದಿ.ಕೆ.ಎಂ.ನಂಜಪ್ಪನವರ 107 ನೇ ಜನ್ಮದಿನದ ಪ್ರಯುಕ್ತ ಸ್ವಯಂಪ್ರೇರಿತ ಬೃಹತ್ ರಕ್ತದಾನ ಮೇಳ ನಡೆಯಿತು.

ಈ ಶಿಬಿರವನ್ನು ದೂರದರ್ಶನ ಕೇಂದ್ರದ ಉಪನಿರ್ದೇಶಕ ನಿರ್ಮಲ ಸಿ. ಎಲಿಗಾರ್ ಉದ್ಘಾಟಿಸಿದರು. ಈ ಶಿಬಿರದಲ್ಲಿ ಸುಮಾರು 700 ಕ್ಕೂ ಹೆಚ್ಚು ಯುನಿಟ್ ರಕ್ತವನ್ನು ಸಂಗ್ರಹಿಸಿ ವಿವಿಧ ಆಸ್ಪತ್ರೆಗಳಿಗೆ ಕಳುಹಿಸಿಕೊಡಲಾಯಿತು. ಈ ಮೇಳದಲ್ಲಿ ಇಂಡಿಯನ್ ರೆಡ್‌ಕ್ರಾಸ್ ಸಂಸ್ಥೆ, ಬ್ಲಡ್ ಡೋನರ್ಸ್ ಅಸೋಸಿಯೇಷನ್, ಬೆಂಗಳೂರು ಸೆಂಟಿನಿಯಲ್ ರೋಟರಿ ಡಿ 3190, ಕಿದ್ವಾಯಿ ಆಸ್ಪತ್ರೆ ಬ್ಲಡ್ ಬ್ಯಾಂಕ್, ಶೇಷಾದ್ರಿಪುರ ಕಾಲೇಜು ಸೇರಿದಂತೆ ಇನ್ನಿತರ ಸಂಸ್ಥೆಯಗಳು ಪಾಲ್ಗೊಂಡಿದ್ದವು.

ಈ ಸಂದರ್ಭದಲ್ಲಿ ಶೇಷಾದ್ರಿಪುರ ಶಿಕ್ಷಣ ದತ್ತಿಯ ಅಧ್ಯಕ್ಷ ಎನ್.ಆರ್. ಪಂಡಿತಾರಾಧ್ಯ, ರಾಜು ಚಂದ್ರಶೇಖರ್, ರೋಟೇರಿಯನ್ ನಂದಿನಿ ಜಗನ್ನಾಥ್, ಸಂಸ್ಥೆಯ ಗೌರವ ಕಾರ್ಯದರ್ಶಿ ಡಾ.ವೂಡೇ ಪಿ. ಕೃಷ್ಣ, ಉಪಾಧ್ಯಕ್ಷ ಟಿ.ಎಸ್.ಹೆಂಜಾರಪ್ಪ, ಡಬ್ಲ್ಯೂ.ಎಚ್. ಅನಿಲ್‌ಕುಮಾರ್, ಕೋಶಾಧ್ಯಕ್ಷ ಬಿ.ಎಂ.ಪಾರ್ಥಸಾರಥಿ, ಎನ್. ಶೇಷನಾರಾಯಣ, ಎಂ.ಎಸ್. ನಟರಾಜ್ ಉಪಸ್ಥಿತರಿದ್ದರು.





ಶೇಷಾದ್ರಿಪುರಂ ಸಮೂಹ ಸಂಸ್ಥೆಯಿಂದ ಕಾಲೇಜು ಆವರಣದಲ್ಲಿ ಕೆ.ಎಂ.ನಂಜಪ್ಪನವರ 107ನೆ ಜನ್ಮ ದಿನಾಚರಣೆ ಅಂಗವಾಗಿ ಹಮ್ಮಿಕೊಳ್ಳಲಾಗಿದ್ದ ಸ್ವಯಂ ಪ್ರೇರಿತ ರಕ್ತದಾನ ಮೇಳದಲ್ಲಿ ಬೆಂಗಳೂರು ದೂರದರ್ಶನದ ನಿಲಯ ಉಪ ನಿರ್ದೇಶಕರಾದ ನಿರ್ಮಲಾ ಸಿ.ಎಲಿಗಾರ್, ರೆಡ್‌ಕ್ರಾಸ್ ಸಂಸ್ಥೆಯ ರಾಜು ಚಂದ್ರಶೇಖರ್, ಕಾಲೇಜಿನ ಗೌರವ ಪ್ರಧಾನ ಕಾರ್ಯದರ್ಶಿ ವೂಡೆ.ಪಿ.ಕೃಷ್ಣ, ಅಧ್ಯಕ್ಷ ಎನ್.ಆರ್.ಪಂಡಿತಾರಾಧ್ಯ, ಉಪಾಧ್ಯಕ್ಷ ಟಿ.ಎಸ್.ಹೆಂಜಾರಪ್ಪ, ಗೌರವ ಸಹಾಯಕ ಕಾರ್ಯದರ್ಶಿ ಎಂ.ಎಸ್.ನಟರಾಜ್ ಮತ್ತಿತರರು ಪಾಲ್ಗೊಂಡಿದ್ದರು.

ವಿಜಯ ಕರ್ನಾಟಕ
ಗುರುವಾರ,31 ಜನವರಿ 2019


ಹುತಾತ್ಮರ ದಿನಾಚರಣೆ ಅಂಗವಾಗಿ ಎಂಜಿ ರಸ್ತೆಯಲ್ಲಿರುವ ಗಾಂಧಿ ಪ್ರತಿಮೆಗೆ ವಿದ್ಯಾರ್ಥಿಗಳು ಪುಷ್ಪನಮನ ಸಲ್ಲಿಸಿದರು.

### ಹಿರಿಯ ಸ್ವಾತಂತ್ರ್ಯ ಹೋರಾಟಗಾರ ಎಚ್.ಎಸ್.ದೊರೆಸ್ವಾಮಿ ಆರೋಪ

# ಗಾಂಧಿ ಹತ್ಯೆ ಮಾಡಿದ್ದು ಆರ್‌ಎಸ್‌ಎಸ್

**ವಿಕ ಸುದ್ದಿಲೋಕ ಬೆಂಗಳೂರು**

ಮಹಾತ್ಮ ಗಾಂಧೀಜಿ ಅವರ ಹತ್ಯೆಯನ್ನು ಆರ್‌ಎಸ್‌ಎಸ್‌ನವರೇ ಮಾಡಿದ್ದಾರೆ ಎಂದು ಸ್ವಾತಂತ್ರ್ಯ ಹೋರಾಟಗಾರ ಎಚ್.ಎಸ್.ದೊರೆಸ್ವಾಮಿ ಆರೋಪಿಸಿದರು.

ಕರ್ನಾಟಕ ಗಾಂಧಿ ಸ್ಮಾರಕ ನಿಧಿ ನಗರದ ಗಾಂಧಿ ಭವನದಲ್ಲಿ ಬುಧವಾರ ಆಯೋಜಿಸಿದ್ದ 'ಬಾ-ಬಾಪು 150ನೇ ಜನ್ಮ ವರ್ಷಾಚರಣೆ - ಸರ್ವೋದಯ ದಿನಾಚರಣೆ' ಕಾರ್ಯಕ್ರಮ ಉದ್ಘಾಟಿಸಿ ಅವರು ಮಾತನಾಡಿದರು.




''ಗಾಂಧಿ ಅವರನ್ನು ಹತ್ಯೆ ಮಾಡುವುದಕ್ಕೂ ಹದಿನೈದು ದಿನ ಮುಂಚೆ ಗೋಡ್ಸೆ ಆರ್‌ಎಸ್‌ಎಸ್ ರ‍್ಯಾಲಿಯಲ್ಲಿ ಪಾಲ್ಗೊಂಡಿದ್ದ. ಆಗ ಆತ ಎಂಥವನು ಎಂಬುದು ನಮಗೆ ತಿಳಿದಿರಲಿಲ್ಲ. ರ‍್ಯಾಲಿಗೆ ಬಂದಿದ್ದ ಗೋಡ್ಸೆ ಆರ್‌ಎಸ್‌ಎಸ್ ಸಂಘಟಕರ ಮನೆಯಲ್ಲಿ ಉಳಿದುಕೊಂಡಿದ್ದ. ಅಂದ ಮೇಲೆ ಇದು ಆರ್‌ಎಸ್‌ಎಸ್‌ನ ಕೆಲಸವಲ್ಲವೇ. ಆದರೆ ಗೋಡ್ಸೆ ನಮ್ಮವನಲ್ಲ ಎಂದು ಅವರು ಹೇಳುತ್ತಿದ್ದಾರೆ. ಆತ ಮಹಾತ್ಮರ ಕೊಲೆ ಮಾಡಿದ ಮೇಲೆಯೇ ಆತ ಎಷ್ಟು ಕ್ರೂರಿ ಎಂಬುದು ತಿಳಿದದ್ದು,''ಎಂದರು.

**'ಸರ್ವೋದಯದ ಗುರಿ:** ''ವಿಶ್ವದಲ್ಲಿ ಎಲ್ಲಿಯೂ ಯುದ್ಧ, ಆಂತರಿಕ ಕಲಹ, ಮನಸ್ತಾಪ, ಕೊಲೆ, ದೌರ್ಜನ್ಯಗಳನ್ನು ಅಡಗಿಸಿ ಶಾಂತಿಯುತ ಸಮಾಜ ಕಟ್ಟುವುದು ಸರ್ವೋದಯದ ಮುಖ್ಯ ಗುರಿ. ಸಮಾಜದ ಆಗುಹೋಗುಗಳನ್ನು ನೋಡಬೇಕು. ಸಮಸ್ಯೆಗಳಿಗೆ ಸೂಕ್ತ ಪರಿಹಾರಗಳನ್ನು ಕಂಡುಕೊಳ್ಳಬೇಕು. ಇದು ಕೇವಲ ಸರಕಾರದ ಹಾಗೂ ಅಧಿಕಾರಿಗಳ ಕೆಲಸವಲ್ಲ, ಪ್ರತಿಯೊಬ್ಬ ಪ್ರಜೆಯ ಕರ್ತವ್ಯ ಆಗಿದೆ. ,''ಎಂದರು.

## ಕೊಲೆಗಾರನಿಗೂ ದೇವಾಲಯ

''ನಮ್ಮ ಜನ ಕೊಲೆಗಡುಕನಿಗೂ ದೇವಾಲಯ ಕಟ್ಟುತ್ತಾರೆ. ಇದು ಅವಿವೇಕದ ಪರಮಾವಧಿ. ಇದು ಸಮಾಜ ಅಲ್ಲ ಕಾಡು. ಶ್ರೀಮಂತರು ಕಾಡು ಮೃಗಗಳು, ಬಡವರು ಸಾಮಾನ್ಯ ಹುಲ್ಲು. ಬಲಿಷ್ಠರು, ಚುನಾವಣೆಯಲ್ಲಿ ಕೋಟಿ ಹಣ ಸುರಿಯುವವರು ಈ ಕಾಡಿನ ರಾಜರು. ಇಂಥವರ ನಡುವೆ ಬದುಕು ಕಟ್ಟಬೇಕಿದೆ,'' ಎಂದು ದೊರೆಸ್ವಾಮಿ ಕಳವಳ ವ್ಯಕ್ತಪಡಿಸಿದರು.

**ಶಾಂತಿಯುತ ಸಮಾಜ:** ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ವೂಡೇ ಪಿ. ಕೃಷ್ಣ ಮಾತನಾಡಿ, ''ಗಾಂಧೀಜಿ ಹತ್ಯೆ ಇಂದಿಗೂ ತೀವ್ರ ನೋವುಂಟು ಮಾಡುತ್ತಿದೆ. ಹಂತಕ ಶಕ್ತಿಗಳು ಇಂದಿಗೂ ರಾರಾಜಿಸುತ್ತಿವೆ. ಕೋಮುವಾದ, ಹಿಂಸಾತ್ಮಕ ಮನಸ್ಸುಗಳನ್ನು ಖಂಡಿಸಿ ಶಾಂತಿಯುತ ಸಮಾಜ ನಿರ್ಮಾಣದತ್ತ ಹೆಜ್ಜೆ ಹಾಕಬೇಕು'' ಎಂದರು.

ಕಾರ್ಯಕ್ರಮದಲ್ಲಿ ವೇಮಗಲ್ ಸೋಮಶೇಖರ್ ಅವರ 'ಮಹದೇವ ದೇಸಾಯಿ' ಹಾಗೂ ಗಾಂಧೀಜಿ ಅವರ 'ಖಾದಿ ಗ್ರಾಮೋದ್ಯೋಗ','ಹಾಸ್ಯ ಮತ್ತು ಗಾಂಧಿ', 'ಒಳ್ಳೆಯ ಜೀವನ', ಮತ್ತು ಪ್ರಕಾಶನ ವಿಭಾಗದ 'ಏಕತೆ ಸಾರುವ ಚಿತ್ರಗಳು' ಪುಸ್ತಕಗಳ ಲೋಕಾರ್ಪಣೆ ಮಾಡಲಾಯಿತು. 'ಯುವ ಜನತೆಗೆ ಗಾಂಧಿ ವಿಚಾರಗಳನ್ನು ತಲುಪಿಸುವ ಆಯಾಮಗಳು' ವಿಷಯ ಕುರಿತು ವಿಚಾರಗೋಷ್ಠಿ ನಡೆಯಿತು. ಆರ್‌ಎನ್‌ಐ ಹೆಚ್ಚುವರಿ ರಿಜಿಸ್ಟ್ರಾರ್ ಎಂ. ನಾಗೇಂದ್ರ ಸ್ವಾಮಿ ಮೊದಲಾದವರು ಉಪಸ್ಥಿತರಿದ್ದರು.

ವಾರ್ತಾಭಾರತಿ

# ಆರೆಸ್ಸೆಸ್‌ನಿಂದ ಗಾಂಧಿಯ ಕೊಲೆ: ದೊರೆಸ್ವಾಮಿ

## ಕಾಲೇಜು ಪ್ರಾಧ್ಯಾಪಕರಿಗಾಗಿ ರಾಜ್ಯ ಮಟ್ಟದ ವಿಚಾರ ಸಂಕಿರಣ

ಬೆಂಗಳೂರು, ಜ.30: ರಾಷ್ಟ್ರಪಿತ ಮಹಾತ್ಮ ಗಾಂಧೀಜಿ ಅವರನ್ನು ಆರೆಸ್ಸೆಸ್‌ನವರೇ ಕೊಲೆಗೈದಿದ್ದು ಎಂದು ಸ್ವಾತಂತ್ರ್ಯ ಹೋರಾಟಗಾರ ಎಚ್.ಎಸ್.ದೊರೆಸ್ವಾಮಿ ಗಂಭೀರ ಆರೋಪಿಸಿದ್ದಾರೆ.

ಬುಧವಾರ ನಗರದ ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಆಯೋಜಿಸಿದ್ದ ಬಾ-ಬಾಪು 150ನೇ ಜನ್ಮ ವರ್ಷಾಚರಣೆ ಸರ್ವೋದಯ ದಿನಾಚರಣೆ, ಕಾಲೇಜು ಪ್ರಾಧ್ಯಾಪಕರಿಗಾಗಿ ರಾಜ್ಯ ಮಟ್ಟದ ವಿಚಾರ ಸಂಕಿರಣ ಕಾರ್ಯಕ್ರಮದಲ್ಲಿ ಅವರು ಮಾತನಾಡಿದರು.

ಮಹಾತ್ಮ ಗಾಂಧಿ ಅವರನ್ನು ಹತ್ಯೆಗೈಯುವ 15 ದಿನ ಮುಂಚೆ ನಾಥೂರಾಮ್ ಗೋಡ್ಸೆ ಬೆಂಗಳೂರಿನಲ್ಲಿ ನಡೆಯುತ್ತಿದ್ದ ಆರೆಸ್ಸೆಸ್ ರ್‍ಯಾಲಿಯಲ್ಲಿ ಪಾಲ್ಗೊಳ್ಳಲು ಬಂದು ಸ್ವಾಗತ ಸಮಿತಿಯ ಅಧ್ಯಕ್ಷರ ಮನೆಯಲ್ಲಿ ತಂಗಿದ್ದ. ಈ ಬಗ್ಗೆ ನಾನು ನನ್ನ ಪತ್ರಿಕೆಯಲ್ಲಿ ವರದಿ ಕೂಡ ಮಾಡಿದ್ದೆ ಎಂದು ಅವರು ನೆನೆದರು.

ನಾಥೂರಾಮ್ ಗೋಡ್ಸೆಗೆ ಆರೆಸ್ಸೆಸ್ ಜೊತೆಗೆ ಸಂಬಂಧ ಇದೆ. ಆದರೆ ಗೋಡ್ಸೆ ನಮ್ಮವನಲ್ಲ ಎಂದು ಆರೆಸ್ಸೆಸ್ ಹೇಳುತ್ತದೆ ಎಂದ ಅವರು, ಈ ರೀತಿ ಕೃತ್ಯವೆಸಗಿದ ಗೋಡ್ಸೆಗೆ ದೇವಾಲಯ ನಿರ್ಮಿಸುವ ಜನರು ಇರುವುದು ಬೇಸರದ ಸಂಗತಿಯಾಗಿದೆ. ಇದರ ಹಿಂದೆ ಬಿಜೆಪಿಯವರ ಕೈವಾಡ ಇದೆ ಎಂದರು. ಕಾರ್ಯಕ್ರಮದಲ್ಲಿ ವೇಮಗಲ್ ಸೋಮಶೇಖರ್, ಹಿರಿಯ ಕರಡು ತಿದ್ದುಪಡಿಗಾರ ಎಸ್.ಕೆ.ಇಂದ್ರಕುಮಾರ್ ಅವರನ್ನು ಗೌರವಿಸಲಾಯಿತು. ಪಿಐಬಿ, ಆರ್‌ಒಬಿನ ಹೆಚ್ಚುವರಿ ಮಹಾ ನಿರ್ದೇಶಕ ಎಂ.ನಾಗೇಂದ್ರಸ್ವಾಮಿ ಸೇರಿದಂತೆ ಪ್ರಮುಖರು ಉಪಸ್ಥಿತರಿದ್ದರು.

ಗಾಂಧಿ ಹತ್ಯೆ ಇಂದಿಗೂ ನೋವುಂಟು ಮಾಡುತ್ತದೆ. ಹಂತಕ ಶಕ್ತಿಗಳು ಅಲ್ಲಲ್ಲಿ ರಾರಾಜಿಸುತ್ತಿವೆ. ಕೋಮುವಾದ, ಹಿಂಸಾತ್ಮಕ ಮನಸ್ಸುಗಳನ್ನು ಖಂಡಿಸಬೇಕು. ಜೊತೆಗೆ ಗಾಂಧೀಜಿ ಅವರ ತತ್ವಗಳನ್ನು ಎಲ್ಲೆಡೆ ಹರಡುವಂತೆ ಮಾಡಬೇಕು.

। ವೂಡೆ ಪಿ.ಕೃಷ್ಣ, ಕರ್ನಾಟಕ ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷ

### 8 ಕೃತಿಗಳ ಲೋಕಾರ್ಪಣೆ

ವೇಮಗಲ್ ಸೋಮಶೇಖರ್ ವಿರಚಿತ 'ಮಹದೇವ ದೇಸಾಯಿ', ಗಾಂಧೀಜಿ ಅವರ 'ಖಾದಿ ಗ್ರಾಮೋದ್ಯೋಗ', 'ಹಾಸ್ಯ ಮತ್ತು ಗಾಂಧಿ' ಸೇರಿದಂತೆ 8 ಕೃತಿಗಳನ್ನು ಲೋಕಾರ್ಪಣೆ ಮಾಡಲಾಯಿತು.

ಉದಯವಾಣಿ
ಗುರುವಾರ, ಜನವರಿ 31, 2019

# ಬೆಂಗ್ಳೂರಲ್ಲಿ ಉಳಿದುಕೊಂಡಿದ್ದ ಗೋಡ್ಸೆ

ಬೆಂಗಳೂರು: ಗಾಂಧಿ ಹಂತಕ ಗೋಡ್ಸೆ, ಗಾಂಧಿಯನ್ನು ಹತ್ಯೆಗೈಯುವ 15 ದಿನಗಳ ಮೊದಲು ಬೆಂಗಳೂರಿಗೆ ಬಂದಾಗ ಆರ್‌ಎಸ್‌ಎಸ್ ಸಂಘಟಕರೊಬ್ಬರ ಮನೆಯಲ್ಲಿ ಉಳಿದುಕೊಂಡಿದ್ದರು ಎಂದು ಸ್ವಾತಂತ್ರ್ಯ ಹೋರಾಟಗಾರ ಎಚ್.ಎಸ್. ದೊರೆಸ್ವಾಮಿ ದೂರಿದ್ದಾರೆ.

ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಬುಧವಾರ ಗಾಂಧಿಭವನದಲ್ಲಿ ಹಮ್ಮಿಕೊಂಡಿದ್ದ 'ಬಾ-ಬಾಪು 150ನೇ ಜನ್ಮ ವರ್ಷಾಚರಣೆ' ಕಾರ್ಯಕ್ರಮದಲ್ಲಿ ಮಾತನಾಡಿದ ಅವರು, ಗೋಡ್ಸೆ ನಮ್ಮವನಲ್ಲ ಎಂದು ಸಂಘ ಪರಿವಾರ ಹೇಳುತ್ತಿದೆ ಎಂದು ಟೀಕಿಸಿದರು. ಸಾರ್ವಜನಿಕ ಸಂಪರ್ಕ ಇಲಾಖೆಯ ಹೆಚ್ಚುವರಿ ಮಹಾನಿರ್ದೇಶಕ ಎಂ.ನಾಗೇಂದ್ರಸ್ವಾಮಿ ಮಾತನಾಡಿ, ಶಾಂತಿಯುತ ಹೋರಾಟಗಳ ಮೂಲಕ ರಾಷ್ಟ್ರಪಿತ ಮಹಾತ್ಮಗಾಂಧಿ ಅವರು ವಿಶ್ವ ಮಟ್ಟದಲ್ಲಿ ಮನೆಮಾತಾಗಿದ್ದಾರೆ. ಇಂತಹ ವ್ಯಕ್ತಿಯ ತತ್ವ ಆದರ್ಶಗಳನ್ನು ನಾವು ಅಳವಡಿಸಿಕೊಳ್ಳಬೇಕು. ಅದುವೇ ನಾವು ಅವರಿಗೆ ನೀಡುವ ನಿಜವಾದ ಗೌರವ ಎಂದರು. ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ವೂಡೇ ಪಿ.ಕೃಷ್ಣ ಮಾತನಾಡಿ, ರಾಷ್ಟ್ರಪಿತ ಮಹಾತ್ಮಗಾಂಧಿ ಅವರ ಹತ್ಯೆ ಇಂದಿಗೂ ನೋವುಂಟು ಮಾಡುತ್ತಿದೆ. ಹಂತಕ ಶಕ್ತಿಗಳು ಅಲ್ಲಲ್ಲಿ ರಾರಾಜಿಸುತ್ತಿದ್ದು, ಇದನ್ನು ನಾವು ಖಂಡಿಸಬೇಕು ಎಂದು ಹೇಳಿದರು.

ಇದೇ ವೇಳೆ ಗಾಂಧಿಚಿಂತಕ ವೇಮಗಲ್ ಸೋಮಶೇಖರ್ ಅವರ 'ಮಹದೇವ ದೇಸಾಯಿ' ಸೇರಿದಂತೆ ಎಂಟು ಕೃತಿಗಳನ್ನು ಲೋಕಾರ್ಪಣೆಗೊಳಿಸಲಾಯಿತು. ಬೆಳಗ್ಗೆಯಿಂದ ಸಂಜೆಯವರೆಗೂ ಗಾಂಧಿಜೀ ಕುರಿತ ಹಲವು ವಿಚಾರಗೋಷ್ಠಿಗಳು ನಡೆದವು. ಶೇಷಾದ್ರಿಪುರ ಕಾಲೇಜು ವಿದ್ಯಾರ್ಥಿಗಳು ಸೇರಿದಂತೆ ವಿವಿಧ ಶಾಲೆಯ ವಿದ್ಯಾರ್ಥಿಗಳು ಪಾಲ್ಗೊಂಡಿದ್ದರು.

ವಾರ್ತಾ ಭಾರತಿ Jan 30, 2019, 9:11 PM IST

# ಗಾಂಧೀಜಿಯನ್ನು ಕೊಲೆಗೈದದ್ದು ಆರೆಸ್ಸೆಸ್‌ನವರು: ದೊರೆಸ್ವಾಮಿ



ಬೆಂಗಳೂರು, ಜ.30: ರಾಷ್ಟ್ರಪಿತ ಮಹಾತ್ಮ ಗಾಂಧೀಜಿ ಅವರನ್ನು ಆರೆಸ್ಸೆಸ್‌ನವರೇ ಕೊಲೆಗೈದಿದ್ದು ಎಂದು ಸ್ವಾತಂತ್ರ್ಯ ಹೋರಾಟಗಾರ ಎಚ್.ಎಸ್.ದೊರೆಸ್ವಾಮಿ ಗಂಭೀರ ಆರೋಪ ಮಾಡಿದರು.

ಬುಧವಾರ ನಗರದ ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಆಯೋಜಿಸಿದ್ದ ಬಾ-ಬಾಪು 150ನೇ ಜನ್ಮ ವರ್ಷಾಚರಣೆ ಸರ್ವೋದಯ ದಿನಾಚರಣೆ, ಕಾಲೇಜು ಪ್ರಾಧ್ಯಾಪಕರಿಗಾಗಿ ರಾಜ್ಯ ಮಟ್ಟದ ವಿಚಾರ ಸಂಕಿರಣ ಕಾರ್ಯಕ್ರಮದಲ್ಲಿ ಅವರು ಮಾತನಾಡಿದರು. ಮಹಾತ್ಮ ಗಾಂಧಿ ಅವರನ್ನು ಹತ್ಯೆಗೈಯುವ 15 ದಿನ ಮುಂಚೆಯೇ ನಾಥೂರಾಮ್ ಗೋಡ್ಸೆ ಬೆಂಗಳೂರಿನಲ್ಲಿ ನಡೆಯುತ್ತಿದ್ದ ಆರೆಸ್ಸೆಸ್ ರ್ಯಾಲಿಯಲ್ಲಿ ಪಾಲ್ಗೊಳ್ಳಲು ಬಂದಾಗ ಸ್ವಾಗತ ಸಮಿತಿಯ ಅಧ್ಯಕ್ಷರ ಮನೆಯಲ್ಲಿ ತಂಗಿದ್ದರು. ಈ ಬಗ್ಗೆ ನಾನು ನನ್ನ ಪತ್ರಿಕೆಯಲ್ಲಿ ವರದಿ ಕೂಡ ಮಾಡಿದ್ದೆ ಎಂದು ದೊರೆಸ್ವಾಮಿ ನೆನೆದರು.

ನಾಥೂರಾಮ್ ಗೋಡ್ಸೆಗೆ ಆರೆಸ್ಸೆಸ್ ಜೊತೆಗೆ ಸಂಬಂಧ ಇದೆ. ಆದರೆ, ಗೋಡ್ಸೆ ನಮ್ಮವನಲ್ಲ ಎಂದು ಸಂಘಪರಿವಾರ ಹೇಳುತ್ತದೆ ಎಂದ ಅವರು, ಈ ರೀತಿ ಕೃತ್ಯವೆಸಗಿದ ಗೋಡ್ಸೆಗೆ ದೇವಾಲಯ ನಿರ್ಮಿಸುವ ಜನರು ಇರುವುದು ಬೇಸರದ ಸಂಗತಿಯಾಗಿದ್ದು, ಇದರ ಹಿಂದೆ ಬಿಜೆಪಿಯವರ ಕೈವಾಡ ಇದೆ ಎಂದರು.

ಕರ್ನಾಟಕ ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷ ವೂಡೆ ಪಿ.ಕೃಷ್ಣ ಮಾತನಾಡಿ, ಗಾಂಧಿ ಹತ್ಯೆ ಇಂದಿಗೂ ನೋವುಂಟು ಮಾಡುತ್ತದೆ. ಹಂತಕ ಶಕ್ತಿಗಳು ಅಲ್ಲಲ್ಲಿ ರಾರಾಜಿಸುತ್ತಿವೆ. ಕೋಮುವಾದ, ಹಿಂಸಾತ್ಮಕ ಮನಸ್ಸುಗಳನ್ನು ಖಂಡಿಸಬೇಕು. ಜೊತೆಗೆ ಗಾಂಧೀಜಿ ಅವರ ತತ್ವಗಳನ್ನು ಎಲ್ಲೆಡೆ ಹರಡುವಂತೆ ಮಾಡಬೇಕೆಂದು ನುಡಿದರು.

8 ಕೃತಿಗಳ ಲೋಕಾರ್ಪಣೆ: ವೇಮುಗಲ್ ಸೋಮಶೇಖರ್ ವಿರಚಿತ 'ಮಹದೇವ ದೇಸಾಯಿ', ಗಾಂಧೀಜಿ ಅವರ 'ಖಾದಿ ಗ್ರಾಮೋದ್ಯೋಗ', 'ಹಾಸ್ಯ ಮತ್ತು ಗಾಂಧಿ' ಸೇರಿದಂತೆ 8 ಕೃತಿಗಳನ್ನು ಲೋಕಾರ್ಪಣೆ ಮಾಡಲಾಯಿತು.

ಕಾರ್ಯಕ್ರಮದಲ್ಲಿ ವೇಮಗಲ್ ಸೋಮಶೇಖರ್, ಹಿರಿಯ ಕರಡು ತಿದ್ದುಪಡಿಗಾರ ಎಸ್.ಕೆ.ಇಂದ್ರಕುಮಾರ್ ಅವರನ್ನು ಗೌರವಿಸಲಾಯಿತು. ಪಿಐಬಿ, ಆರ್‌ಒಬಿನ ಹೆಚ್ಚುವರಿ ಮಹಾ ನಿರ್ದೇಶಕ ಎಂ.ನಾಗೇಂದ್ರಸ್ವಾಮಿ ಸೇರಿದಂತೆ ಪ್ರಮುಖರು ಉಪಸ್ಥಿತರಿದ್ದರು.

ಉದಯವಾಣಿ ಬೆಂಗಳೂರು
ಬುಧವಾರ, ಜನವರಿ 23, 2019

# ರಾಜಧಾನಿಯಲ್ಲಿ ಶ್ರೀಗಳ ಸ್ಮರಣೆ, ಶ್ರದ್ಧಾಂಜಲಿ

## ಶ್ರೀ ಶಿವಕುಮಾರ ಸ್ವಾಮೀಜಿ ನಿಧನಕ್ಕೆ ಗಣ್ಯರಿಂದ ಸಂತಾಪ, ನುಡಿನಮನ



ನಗರ ಕೇಂದ್ರ ಜಿಲ್ಲಾ ಕಾಂಗ್ರೆಸ್ ಪ್ರಚಾರ ಸಮಿತಿ ವತಿಯಿಂದ ಮೌರ್ಯ ವೃತ್ತದ ಗಾಂಧಿ ಪ್ರತಿಮೆ ಬಳಿ ಸಿದ್ಧಗಂಗಾ ಶ್ರೀ ಶಿವಕುಮಾರ ಸ್ವಾಮೀಜಿಗೆ ಶ್ರದ್ಧಾಂಜಲಿ ಸಲ್ಲಿಸಲಾಯಿತು.



ಕನ್ನಡಪರ ಸಂಘಟನೆಗಳು ಮೈಸೂರು ಬ್ಯಾಂಕ್ ವೃತ್ತದಲ್ಲಿ ಶ್ರದ್ಧಾಂಜಲಿ ಸಭೆ ನಡೆಸಿದರು. ಈ ವೇಳೆ ಸಾ.ರಾ ಗೋವಿಂದ ಸ್ವಾಮೀಜಿ ಭಾವಚಿತ್ರಕ್ಕೆ ಪುಷ್ಪ ನಮನ ಸಲ್ಲಿಸಿದರು.

ಬೆಂಗಳೂರು: ಸಿದ್ಧಗಂಗಾ ಮಠದ ಶಿವಕುಮಾರ ಸ್ವಾಮೀಜಿಗಳು ನಿಧನರಾದ ಹಿನ್ನೆಲೆ, ಮಂಗಳವಾರ ಅವರ ಅಂತಿಮ ದರ್ಶನಕ್ಕಾಗಿ ರಾಜಧಾನಿಯ ಜನತೆಯೇ ತುಮಕೂರಿನತ್ತ ಮುಖ ಮಾಡಿತ್ತು. ಸರ್ಕಾರಿ ರಜೆ ಘೋಷಣೆ ಹಾಗೂ ನಗರದಿಂದ ಉಚಿತವಾಗಿ ಬಸ್, ರೈಲಿನ ವ್ಯವಸ್ಥೆ ಮಾಡಿದ್ದ ಹಿನ್ನೆಲೆ ಸಾವಿರಾರು ಮಂದಿ ತುಮಕೂರಿನತ್ತ ಸಾಗಿದರು.

ನಗರದ ಪ್ರಮುಖ ವೃತ್ತಗಳಲ್ಲಿ, ವಿವಿಧ ಸಂಘಟನೆಗಳ ಕಚೇರಿಗಳಲ್ಲಿ, ಹೋಟೆಲ್, ಗ್ಯಾರೆಜ್, ವ್ಯಾಪಾರಿ ಮಳಿಗೆಗಳಲ್ಲಿ, ಬಸ್ ನಿಲ್ದಾಣ, ಆಟೋ ನಿಲ್ದಾಣ, ಟ್ಯಾಕ್ಸಿ ಚಾಲಕರ ಸಂಘ, ರಾಜಕೀಯ ಪಕ್ಷಗಳ ಕಚೇರಿಗಳು, ಉದ್ಯಾನಗಳು ಹೀಗೆ ಎಲ್ಲೆಡೆ ಸಿದ್ಧಗಂಗಾ ಶ್ರೀಗಳ ಭಾವಚಿತ್ರವನ್ನಿಟ್ಟು ಪುಷ್ಪನಮನ ಸಲ್ಲಿಸಲಾಯಿತು. ತೋಟದಪ್ಪ ಛತ್ರ, ವೀರಶೈವ ಸಂಘ ಸಂಸ್ಥೆಗಳಲ್ಲಿ ಶ್ರದ್ಧಾಂಜಲಿ ಹಾಗೂ ಪ್ರಾರ್ಥನೆ ಕಾರ್ಯಕ್ರಮಗಳು ನಡೆದವು. ಈ ಮೂಲಕ ಲಿಂಗೈಕ್ಯರಾದ ಸಿದ್ಧಗಂಗಾ ಮಠದ ಶಿವಕುಮಾರ ಸ್ವಾಮೀಜಿಯವರಿಗೆ ನಗರವೇ ಅತ್ಯಂತ ಭಕ್ತಿ ಮತ್ತು ಭಾವಪೂರ್ವಕ ಶ್ರದ್ಧಾಂಜಲಿ ಸಲ್ಲಿಸಿತು.

ಬೆಂಗಳೂರಿನ ಕನ್ನಡಪರ ಸಂಘಟನೆಗಳು ಮೈಸೂರು ಬ್ಯಾಂಕ್ ವೃತ್ತದಲ್ಲಿ ಭಕ್ತಿ ನಮನ ಮತ್ತು ಶ್ರದ್ಧಾಂಜಲಿ ಸಭೆ ನಡೆಸಿದರು. ಸಾ.ರಾ ಗೋವಿಂದ ಸ್ವಾಮೀಜಿಗಳ ಭಾವಚಿತ್ರಕ್ಕೆ ಪುಷ್ಪ ನಮನ ಸಲ್ಲಿಸಿದರು. ತ್ರಿವಿಧ ದಾಸೋಹಿಗಳಾದ ಶ್ರೀಗಳಿಗೆ ಈಗಲಾದರೂ ಕೇಂದ್ರ ಸರ್ಕಾರ ಭಾರತ ರತ್ನ ಪುರಸ್ಕಾರ ನೀಡಿ ಗೌರವಿಸಲೆಂದು ನೆರೆದಿದ್ದ ಸಂಘಟನೆಗಳ ಸದಸ್ಯರು ಆಗ್ರಹಿಸಿದರು.

**ಭಾರತ ರತ್ನಕ್ಕೆ ಆಗ್ರಹ:** ಬೆಂಗಳೂರು ನಗರ ಕೇಂದ್ರ ಜಿಲ್ಲಾ ಕಾಂಗ್ರೆಸ್ ಪ್ರಚಾರ ಸಮಿತಿ ವತಿಯಿಂದ ಮೌರ್ಯ ವೃತ್ತದ ಗಾಂಧಿ ಪ್ರತಿಮೆ ಬಳಿ ಶಿವಕುಮಾರ ಸ್ವಾಮೀಜಿಗೆ ಶ್ರದ್ಧಾಂಜಲಿ ಸಲ್ಲಿಸಿ ಮಾತನಾಡಿದ ಮುಖಂಡ ಎಸ್.ಮನೋಹರ್ ಅವರು, ಸ್ವಾಮೀಜಿ ಅನ್ನ, ವಿದ್ಯೆ, ಆಶ್ರಯ ದಾಸೋಹ ತತ್ವವನ್ನು ಮಾಡಿಕೊಂಡು ಬಂದು ತ್ರಿವಿಧ ದಾಸೋಹಿ ಎನಿಸಿಕೊಂಡಿದ್ದರು. ಜತೆಗೆ ಕಾಯಕಯೋಗಿ ಬಸವೇಶ್ವರ ತತ್ವ,ಆದರ್ಶಗಳನ್ನು ವಿಶ್ವಕ್ಕೆ ಸಾರಿದ ಅಭಿನವ ಬಸವಣ್ಣ ಎಂಬ ಕೀರ್ತಿಗಳಿಸಿದ್ದಾರೆ. ಕೇಂದ್ರ ಸರ್ಕಾರ ಇವರ ದಾಸೋಹ ಸೇವೆಯನ್ನು ಪರಿಗಣಿಸಿ ಭಾರತರತ್ನ ನೀಡುಬೇಕು ಎಂದರು.

ಬೆಂಗಳೂರು ನಗರ ಕೇಂದ್ರ ಜಿಲ್ಲಾ ಕಾಂಗ್ರೆಸ್ ಪ್ರಚಾರ ಸಮಿತಿ ಅಧ್ಯಕ್ಷ ಜಿ.ಜನಾರ್ದನ್, ಕಾಂಗ್ರೆಸ್ ಮುಖಂಡ ಸಲೀಂ ಶೇಖರ್, ಆನಂದ್, ಆದಿತ್ಯ, ರಾಜು, ಮಹಿಳಾ ಕಾಂಗ್ರೆಸ್ ಘಟಕದ ಅಧ್ಯಕ್ಷೆ ಆಶಾರಾಜು, ಕೋಕಿಲ, ರಚನಾ ಸೇರಿದಂತೆ ಕಾರ್ಯಕರ್ತರು ಶ್ರೀಗಳ ಭಾವಚಿತ್ರಕ್ಕೆ ಪುಷ್ಪನಮನ ಸಲ್ಲಿಸಿದರು.

**ವಿವಿಧೆಡೆ ಶ್ರದ್ಧಾಂಜಲಿ:** ಕೆ.ಆರ್.ಪುರಂ ವೀರಶೈವ ಲಿಂಗಾಯತ ಸಂಘ ತಾಲೂಕು ಸಮಿತಿ ಸದಸ್ಯರು ಪ್ರಾರ್ಥಿಸಿ, ಸಿದ್ಧಗಂಗಾ ಶ್ರೀಗಳಿಗ ನುಡಿನಮನ ಸಲ್ಲಿಸಿದರು. ಜಯನಗರದ ಮಯ್ಯಾಸ್ ಹೋಟೆಲ್ ಮುಂಭಾಗದಲ್ಲಿ ಲಾಲ್‌ಬಾಗ್ ನಡಿಗೆದಾರರ ಒಕ್ಕೂಟದ ಸದಸ್ಯರು ಶ್ರೀಗಳ ಭಾವಚಿತ್ರಕ್ಕೆ ಪುಷ್ಪನಮನ ಸಲ್ಲಿಸಿದರು. ಮಕ್ಕಳ ಕೂಟ ವತಿಯಿಂದ ಶ್ರೀಗಳ ಭಾವಚಿತ್ರವಿಟ್ಟು ನಮನ ಸಲ್ಲಿಸಲಾಗಿತ್ತು. ಕೋರಮಂಗಲದ ಕೇಂದ್ರೀಯ ಸದನದಲ್ಲಿ ನೌಕರು ಹಾಗೂ ಕುಮಾರಸ್ವಾಮಿ ಲೇಔಟ್‌ನಲ್ಲಿ ವೀರಶೈವ ಸಮಾಜ ಸದಸ್ಯರು ಶ್ರದ್ಧಾಂಜಲಿ ಸಲ್ಲಿಸಿದರು.

ಅಂಜನಾಪುರ, ಕೊತ್ತನೂರು ದಿನ್ನೆ, ಆರ್‌ಬಿಐ ಬಡಾವಣೆ, ಮಹಾದೇವಪುರ ಬಳಿಯ ದೊಡ್ಡನೆಕ್ಕುಂದಿ ವಾರ್ಡ್, ಕೆಂಗೇರಿ ಉಪನಗರದ ಕೆಎಚ್‌ಬಿ ಪ್ಲಾಟಿನಂ ಅಸೋಸಿಯೇಷನ್, ಜಲ ಮಂಡಳಿಯು ಮೈಸೂರು ರಸ್ತೆಯ, ಎಸ್‌ಟಿಪಿ ವ್ಯಾಲಿ, ಚಾಮರಾಜಪೇಟೆಯ ವಿವಿಧ ಅಂಗಡಿ ಮುಂಗಟ್ಟುಗಳಲ್ಲಿ, ಆಟೋ ಚಾಲಕರ ಸಂಘಗಳಿಂದ ಶ್ರೀಗಳಿಗೆ ಭಾವಪೂರ್ಣ ಶ್ರದ್ಧಾಂಜಲಿ ಸಲ್ಲಿಸಲಾಯಿತು.

### ಸಮಾಜ ಸೇವೆ

ಗಾಂಧಿ ಅನುಯಾಯಿ ಆಗಿದ್ದ ಶಿವಕುಮಾರಸ್ವಾಮೀಜಿಗಳು ಬಡವರ ಕಲ್ಯಾಣಕ್ಕಾಗಿ ತಮ್ಮ ಜೀವನವನ್ನು ಸಮರ್ಪಿಸಿದರು. ಬಡತನ, ಹಸಿವು ಮತ್ತು ಸಾಮಾಜಿಕ ಅನ್ಯಾಯದ ವಿರುದ್ಧ ಹೋರಾಡಿ ಬಸವನ ಆದರ್ಶಗಳನ್ನು ಕಾರ್ಯರೂಪಕ್ಕೆ ತಂದಿದ್ದರು. ರಾಜಕೀಯ ಹೊರತು ಪಡಿಸಿ ಸ್ವಾಮೀಜಿ ಮಾಡಿದ ಸೇವೆ ಅವರ ಹೆಸರನ್ನು ಹಸಿರಾಗಿಸಿದೆ ಎಂದು ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ಡಾ ವುಡೆ ಪಿ ಕೃಷ್ಣ ಅವರು ಶ್ರೀಗಳಿಗೆ ನುಡಿ ನಮನ ಸಲ್ಲಿಸಿದ್ದಾರೆ.

### ಶ್ರೀಗಳಿಗೆ ಭಾರತರತ್ನ ನೀಡಲು ಒತ್ತಾಯ

ನಗರದಲ್ಲಿ ಮಂಗಳವಾರ ನಡೆದ ಎಲ್ಲಾ ನುಡಿ ನಮನ ಹಾಗೂ ಶ್ರದ್ಧಾಂಜಲಿ ಸಮಾರಂಭಗಳಲ್ಲಿ ತ್ರಿವಿಧ ದಾಸೋಹಿ ಮಹಾನ್, ಕಾಯಕ ಯೋಗಿಗೆ ಶೀಘ್ರವೇ 'ಭಾರತ ರತ್ನ' ನೀಡಬೇಕು ಎಂದು ಒತ್ತಾಯಿಸಲಾಗಿದೆ. ಪ್ರಶಸ್ತಿ ಕುರಿತು ರಾಜ್ಯ ಸರ್ಕಾರ ಹಾಗೂ ಎಲ್ಲಾ ಸಂಸದರು ಅಗತ್ಯ ಒತ್ತಡ ತರಬೇಕು ಎಂದು ಕೆಲವು ಸಭೆಗಳಲ್ಲಿ ಆಗ್ರಹಿಸಲಾಯಿತು.

ಮಂಗಳವಾರ, ಜನವರಿ 15, 2019






ಬೆಂಗಳೂರಿನ ಗಾಂಧಿಭವನದಲ್ಲಿ ಸೋಮವಾರ ನಡೆದ ನಾಡೋಜ ಡಾ.ಪಾಟೀಲ ಪುಟ್ಟಪ್ಪ ಜನ್ಮ ದಿನೋತ್ಸವ ಕಾರ್ಯಕ್ರಮದಲ್ಲಿ ಪಾಪು ಅವರನ್ನು ಸನ್ಮಾನಿಸಲಾಯಿತು. ಸಚಿವ ಎಂ.ಪಿ. ನಾಡಗೌಡ, ಕೇಂದ್ರ ಮಾಜಿ ಸಚಿವ ಎಂ.ವಿ.ರಾಜಶೇಖರನ್, ಮಾಜಿ ಸಂಸದ ಹನುಮಂತಪ್ಪ, ಬಿಎಲ್.ಶಂಕರ್, ವೂಡೆ ಪಿ. ಕೃಷ್ಣ ಮತ್ತಿತರರು ಇದ್ದಾರೆ.




www.udayakala.news
ಮಂಗಳವಾರ, ಜನವರಿ 15, 2019

# ಭಾರತದ ಪ್ರಪ್ರಥಮ ಇಂಟರ್-ಕಾಲೇಜಿಯೇಟ್ ಡಿಜಿಟಲ್ ಸ್ಟಡಿ ರೂಮ್ಸ್ ಕ್ಯೂಬರ್‌ಗೆ ಚಾಲನೆ

ಬೆಂಗಳೂರು: ಶೇಷಾದ್ರಿಪುರ ಶಿಕ್ಷಣ ಟ್ರಸ್ಟ್ ರಾಜ್ಯದ ಪಿ.ಯು.ಸಿ. ವಿದ್ಯಾರ್ಥಿಗಳು ಮುಂಬರುವ ಪರೀಕ್ಷೆಯನ್ನು ಸಮರ್ಥವಾಗಿ ಎದುರಿಸಲು ಮತ್ತು ನಿರ್ದಿಷ್ಟ ಉತ್ತರ ಬರೆಯಲು ಅನುಕೂಲವಾಗುವಂತಹ ಮಾಹಿತಿಯನ್ನೊದಗಿಸುವ ಕಾರ್ಯಕ್ರಮವನ್ನು ರೂಪಿಸಿದೆ. ಈ ಕಾರ್ಯಕ್ರಮಕ್ಕೆ ಕ್ಯೂಬರ್ ಎಂದು ಹೆಸರಿಸಲಾಗಿದೆ. ಕ್ಯೂಬರ್ ಪ್ರಸ್ತುತ ಮೂರು ವಿಶಿಷ್ಟ ಕಾರ್ಯಕ್ರಮಗಳನ್ನು ರೂಪಿಸಿದ್ದು, ಪ್ರತಿದಿನ 5, ಮಾರ್ಗದರ್ಶನ ಮತ್ತು ಚರ್ಚಾ ವೇದಿಕೆ ಎಂಬುವು ಈ ಮೂರು ಕಾರ್ಯಕ್ರಮಗಳಾಗಿವೆ.

ಮೊದಲನೆಯದಾಗಿ ಪ್ರತಿನಿತ್ಯ ಪ್ರತಿ ವಿಷಯದ ಮೇಲೆ ತಲಾ ಐದು ಸಂಭಾವ್ಯ ಪ್ರಶ್ನೆಗಳನ್ನು ರೂಪಿಸಿ ಇದೇ ಜನವರಿ ಪ್ರತಿ ನಿತ್ಯ ಸಂಜೆ 6 ಕ್ಕೆ ಸರಿಯಾಗಿ ವಿದ್ಯಾರ್ಥಿಗಳಿಗೆ ಒದಗಿಸಲಾಗುವುದು. ವಿದ್ಯಾರ್ಥಿಗಳು ಈ ಪ್ರಶ್ನೆಗಳಿಗೆ ಉತ್ತರವನ್ನು ಬರೆದು ಮೊಬೈಲಿನಲ್ಲಿ ಛಾಯಾಚಿತ್ರ ತೆಗೆದು ವೆಬ್, ಇಂಟರ್‌ನೆಟ್ ಅಥವಾ ಮೊಬೈಲಿನ ಮೂಲಕ ಕಳಿಸಬೇಕು.

> ಗ್ರಾಮೀಣ ವಿದ್ಯಾರ್ಥಿಗಳಿಗೆ ಇಂಥ ಸ್ಪರ್ಧಾತ್ಮಕ [illegible] ತಂತ್ರಜ್ಞಾನ ಮತ್ತು ಪರಿಣಿತ ಸೇವೆಯನ್ನೊದಗಿಸಲು ಶೇಷಾದ್ರಿಪುರಂ ಶಿಕ್ಷಣ ಟ್ರಸ್ಟ್‌ನ ಶಿಕ್ಷಕ ಮತ್ತು ವಿದ್ಯಾರ್ಥಿ ಪ್ರಪಂಚ ಹೆಮ್ಮೆ ಪಡುತ್ತದೆ.
>
> -ಪ್ರೊ. ವೂಡೇ ಪಿ ಕೃಷ್ಣ
> ಶೇಷಾದ್ರಿಪುರಮ್ ಶಿಕ್ಷಣ ಸಂಸ್ಥೆ

ವಿದ್ಯಾರ್ಥಿ ಕಳಿಸಿದ ಉತ್ತರವನ್ನು ಪರಿಣತರು ಪರಿಶೀಲಿಸಿ ಅದರಲ್ಲಿರುವ ತಪ್ಪನ್ನು ಗುರುತಿಸಿ ಸರಿ ಉತ್ತರವೇನೆಂಬುದನ್ನೂ ತಿಳಿಸುತ್ತಾರೆ. ಇದರಿಂದ ಪಿಯು ವಿದ್ಯಾರ್ಥಿ ಹೆಚ್ಚು ಅಂಕ ಗಳಿಸಲು ಸಾಧ್ಯ.

ಎರಡನೆಯದಾಗಿ ರಾಜ್ಯಾದ್ಯಂತ ವಿವಿಧ ಸಂಘ ಸಂಸ್ಥೆಗಳ ಸಹಾಯ ಸಹಕಾರದೊಂದಿಗೆ ಮಾರ್ಗದರ್ಶಕ ಪ್ರಶ್ನೋತ್ತರ ಅಧಿವೇಶನಗಳನ್ನೂ ಸಂಘಟಿಸಲಾಗುವುದು.

ಮೂರನೆಯದಾಗಿ ವಿಜ್ಞಾನ, ಕಲೆ ಮತ್ತು ವಾಣಿಜ್ಯ ವಿದ್ಯಾರ್ಥಿಗಳಿಗೆ ಕೊಠಡಿಯಿಂದ ಹೊರತಾಗಿ ಮೊಬೈಲ್ ಮುಖಾಂತರ ಸಂಯೋಜನೆ, ಸ್ಪರ್ಧೆ ಮತ್ತು ಸಾಮೂಹಿಕ ತಂತ್ರಜ್ಞಾನ ಶಿಕ್ಷಣ ಕಲಿಕೆಗೆ ಅವಕಾಶ ಮಾಡಿಕೊಡುವುದು ಈ ವ್ಯವಸ್ಥೆಯ ಗುರಿ.

ರಾಜ್ಯಾದ್ಯಂತ ವಿದ್ಯಾರ್ಥಿಗಳು ವೆಬ್ (https://onbimba.com/qber) ಅಥವಾ ಮೊಬೈಲ್‌ನಲ್ಲಿ Bimba ಆಪನ್ನು (ಪ್ಲೇ ಸ್ಟೋರ್ ಅಥವ ಆಪ್ ಸ್ಟೋರಿನಿಂದ) ಡೌನ್ ಲೋಡ್ ಮಾಡಿಕೊಳ್ಳಬೇಕು ಮತ್ತು ವಿಜ್ಞಾನದ ವಿದ್ಯಾರ್ಥಿಗಳು (PUScience-Room) ವಾಣಿಜ್ಯ ವಿದ್ಯಾರ್ಥಿಗಳು (PU CommerceRoom) ಕಲಾ ವಿದ್ಯಾರ್ಥಿಗಳು (PU ACommerceRoom) ಕೊಠಡಿಯನ್ನು ಸೇರಿಕೊಳ್ಳತಕ್ಕದ್ದು.

ಸಂಪರ್ಕಿಸಿ : Girish (9742091755), Hari Prakash (9845601453).




www.udayakala.news
ಮಂಗಳವಾರ, ಜನವರಿ 15, 2019

# ಭಾರತದ ಪ್ರಪ್ರಥಮ ಇಂಟರ್-ಕಾಲೇಜಿಯೇಟ್ ಡಿಜಿಟಲ್ ಸ್ಟಡಿ ರೂಮ್ಸ್ ಕ್ಯೂಬರ್‌ಗೆ ಚಾಲನೆ

ಬೆಂಗಳೂರು: ಶೇಷಾದ್ರಿಪುರ ಶಿಕ್ಷಣ ಟ್ರಸ್ಟ್ ರಾಜ್ಯದ ಪಿ.ಯು.ಸಿ ವಿದ್ಯಾರ್ಥಿಗಳು ಮುಂಬರುವ ಪರೀಕ್ಷೆಯನ್ನು ಸಮರ್ಥವಾಗಿ ಎದುರಿಸಲು ಮತ್ತು ನಿರ್ದಿಷ್ಟ ಉತ್ತರ ಬರೆಯಲು ಅನುಕೂಲವಾಗುವಂತಹ ಮಾಹಿತಿಯನ್ನೊದಗಿಸುವ ಕಾರ್ಯಕ್ರಮವನ್ನು ರೂಪಿಸಿದೆ. ಈ ಕಾರ್ಯಕ್ರಮಕ್ಕೆ ಕ್ಯೂಬರ್ ಎಂದು ಹೆಸರಿಸಲಾಗಿದೆ. ಕ್ಯೂಬರ್ ಪ್ರಸ್ತುತ ಮೂರು ವಿಶಿಷ್ಟ ಕಾರ್ಯಕ್ರಮಗಳನ್ನು ರೂಪಿಸಿದ್ದು, ಪ್ರತಿದಿನ 5, ಮಾರ್ಗದರ್ಶನ ಮತ್ತು ಚರ್ಚಾ ವೇದಿಕೆ ಎಂಬುವು ಈ ಮೂರು ಕಾರ್ಯಕ್ರಮಗಳಾಗಿವೆ.

ಮೊದಲನೆಯದಾಗಿ ಪ್ರತಿನಿತ್ಯ ಪ್ರತಿ ವಿಷಯದ ಮೇಲೆ ತಲಾ ಐದು ಸಂಭಾವ್ಯ ಪ್ರಶ್ನೆಗಳನ್ನು ಊಹಿಸಿ ಇದೇ ಜನವರಿ ಪ್ರತಿ ನಿತ್ಯ ಸಂಜೆ 6 ಕ್ಕೆ ಸರಿಯಾಗಿ ವಿದ್ಯಾರ್ಥಿಗಳಿಗೆ ಒದಗಿಸಲಾಗುವುದು. ವಿದ್ಯಾರ್ಥಿಗಳು ಈ ಪ್ರಶ್ನೆಗಳಿಗೆ ಉತ್ತರವನ್ನು ಬರೆದು ಮೊಬೈಲಿನಲ್ಲಿ ಛಾಯಾಚಿತ್ರ ತೆಗೆದು ವೆಬ್, ಇಂಟರ್ ನೆಟ್ ಅಥವಾ ಮೊಬೈಲಿನ ಮೂಲಕ ಕಳಿಸಬೇಕು.




ವಿದ್ಯಾರ್ಥಿ ಕಳಿಸಿದ ಉತ್ತರವನ್ನು ಪರಿಣಿತರು ಪರಿಶೀಲಿಸಿ ಅದರಲ್ಲಿರುವ ತಪ್ಪನ್ನು ಗುರುತಿಸಿ ಸರಿ ಉತ್ತರವೇನೆಂಬುದನ್ನೂ ತಿಳಿಸುತ್ತಾರೆ. ಇದರಿಂದ ಪಿಯು ವಿದ್ಯಾರ್ಥಿ ಹೆಚ್ಚು ಅಂಕ ಗಳಿಸಲು ಸಾಧ್ಯ.

ಎರಡನೆಯದಾಗಿ ರಾಜ್ಯಾದ್ಯಂತ ವಿವಿಧ ಸಂಘ ಸಂಸ್ಥೆಗಳ ಸಹಾಯ ಸಹಕಾರದೊಂದಿಗೆ ವಾರಕ್ಕೊಮ್ಮೆ ಮಾರ್ಗದರ್ಶಕ ಪ್ರಶ್ನೋತ್ತರ ಅಧಿವೇಶನಗಳನ್ನೂ ಸಂಘಟಿಸಲಾಗುವುದು.

ಮೂರನೆಯದಾಗಿ ವಿಜ್ಞಾನ, ಕಲೆ ಮತ್ತು ವಾಣಿಜ್ಯ ವಿದ್ಯಾರ್ಥಿಗಳಿಗೆ ಕೊಠಡಿಯಿಂದ ಹೊರತಾಗಿ ಮೊಬೈಲ್ ಮುಖಾಂತರ ಸಂಯೋಜನೆ, ಸ್ಪರ್ಧೆ ಮತ್ತು ಸಾಮೂಹಿಕ ತಂತ್ರಜ್ಞಾನ ಶಿಕ್ಷಣ ಕಲಿಕೆಗೆ / ಅವಕಾಶ ಮಾಡಿಕೊಡುವುದು ಈ ವ್ಯವಸ್ಥೆಯ ಗುರಿ.

ರಾಜ್ಯಾದ್ಯಂತ ವಿದ್ಯಾರ್ಥಿಗಳು ವೆಬ್ (https://onbimba.com/qber) ಅಥವಾ ಮೊಬೈಲ್‌ನಲ್ಲಿ Bimba ಆಪನ್ನು (ಪ್ಲೇ ಸ್ಟೋರ್ ಅಥವ ಆಪ್ ಸ್ಟೋರ್‌ನಿಂದ) ಡೌನ್ ಲೋಡ್ ಮಾಡಿಕೊಳ್ಳಬೇಕು ಮತ್ತು ವಿಜ್ಞಾನದ ವಿದ್ಯಾರ್ಥಿಗಳು (PUScience-Room) ವಾಣಿಜ್ಯ ವಿದ್ಯಾರ್ಥಿಗಳು (PU Com-merceRoom) ಕಲಾ ವಿದ್ಯಾರ್ಥಿಗಳು (PU ACommerceRoom) ಕೊಟಡಿಯನ್ನು ಸೇರಿಕೊಳ್ಳತಕ್ಕದ್ದು.

ಸಂಪರ್ಕಿಸಿ : Girish (9742091755), Hari Prakash (9845601453).

ಸೋಮವಾರ, 14-1-2019



ಶೇಷಾದ್ರಿಪುರಂ ಕಾಲೇಜಿನಲ್ಲಿಂದು ಡಿಜಿಟಲ್ ಅಧ್ಯಯನ ಕೊಠಡಿಯನ್ನು ಶೇಷಾದ್ರಿಪುರಂ ಶಿಕ್ಷಣ ದತ್ತಿಯ ಅಧ್ಯಕ್ಷ ವೂಡೆ ಪಿ.ಕೃಷ್ಣ ಉದ್ಘಾಟಿಸಿ ವಿದ್ಯಾರ್ಥಿಗಳೊಂದಿಗೆ ಸಂವಾದ ನಡೆಸಿದರು. ಕಾಲೇಜಿನ ಪ್ರಾಂಶುಪಾಲ ಪ್ರೊ. ಜಿ.ಕೆ.ಮಂಜುನಾಥ್, ಐಪೊಮೋ ಕಮ್ಯೂನಿಕೇಷನ್‌ನ ಹರಿ ಪ್ರಕಾಶ್ ಮತ್ತಿತರರು ಈ ಸಂದರ್ಭದಲ್ಲಿ ಹಾಜರಿದ್ದರು.




**ವಿಜಯವಾಣಿ** ಸೋಮವಾರ 14 ಜನವರಿ 2019
14 JANUARY 2019

**ಪ್ರಕರೆ**

» ಡಿಜಿಟಲ್ ತರಗತಿಗಳಿಗೆ ಚಾಲನೆ: ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆಗಳ ಆಯೋಜನೆ.

ಗ್ರಾಮೀಣ ಪ್ರದೇಶದ ವಿದ್ಯಾರ್ಥಿಗಳಿಗಾಗಿ ಕ್ಯೂಬೆರ್ ಅತ್ಯಾಧುನಿಕ, ಡಿಜಿಟಲ್ ತರಗತಿಗಳ ಉದ್ಘಾಟನೆ. ಉದ್ಘಾಟನೆ: ಶಿಕ್ಷಣ ತಜ್ಞ ಡಾ.ವೂಡೇ ಪಿ. ಕೃಷ್ಣ. ಸ್ಥಳ: ಶೇಷಾದ್ರಿ ಪುರಂ ಕಾಲೇಜು, ನಂ.27, ನಾಗಪ್ಪ ಮಾರ್ಗ, ಶೇಷಾದ್ರಿಪುರ, ಬೆಳಗ್ಗೆ 11ಕ್ಕೆ.



» ಬೀಳ್ಕೊಡುಗೆ ಸಮಾರಂಭ: ಬೆಂಗಳೂರು

**ವಿಜಯ ಕರ್ನಾಟಕ**
ಸೋಮವಾರ, 14 ಜನವರಿ 2019

ಶೇಷಾದ್ರಿಪುರ ಶಿಕ್ಷಣ ಸಂಸ್ಥೆ: ಕ್ಯೂಬಿಷರ್ ಉದ್ಘಾಟನೆ: ಶಿಕ್ಷಣ ತಜ್ಞ ಡಾ. ವೂಡೇ ಪಿ. ಕೃಷ್ಣ. ಸ್ಥಳ: ನಂ.27, ನಾಗಪ್ಪ ಸ್ಟ್ರೀಟ್, ಶೇಷಾದ್ರಿಪುರ. 11.00

**ಕನ್ನಡಪ್ರಭ**
ಸೋಮವಾರ 14.1.2019

ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆ: ಇನೋವೇಟಿವ್ ಡಿಜಿಟಲ್ ಸ್ಟಡಿ ರೂಮ್ಸ್ ಉದ್ಘಾಟನೆ. ಉದ್ಘಾಟನೆ: ಗಾಂಧೀ ಸ್ಮಾರಕ ಫೌಂಡೇಶನ್‌ನ ಡಾ.ವೂಡೇ ಪಿ. ಕೃಷ್ಣ. ಸ್ಥಳ: ಶೇಷಾದ್ರಿಪುರಂ ಕಾಲೇಜ್, ನಾಗಪ್ಪ ರಸ್ತೆ, ಶೇಷಾದ್ರಿಪುರಂ, ಬೆಳಗ್ಗೆ 11.

**2 DECCAN HERALD**
Monday, January 14, 2019

**GENERAL**
**Seshadripuram Educational Institutions:** Launch of QBER innovative digital study rooms by educationist Dr Wooday P Krishna; Seshadripuram College, No 27, Nagappa Street, Seshadripuram; 11 am

ಹೊಸ ದಿಗಂತ ಶನಿವಾರ, 12 ಜನವರಿ 2019



ನಾಡೋಜ ಡಾ.ಪಾಟೀಲ ಪುಟ್ಟಪ್ಪ ಅವರ ಜನ್ಮಶತಮಾನೋತ್ಸವದ ಹಿನ್ನೆಲೆಯಲ್ಲಿ ನಗರದ ಗಾಂಧಿ ಭವನದಲ್ಲಿ ಪಾಪು ಅವರನ್ನು ಸನ್ಮಾನಿಸಲಾಯಿತು. ಈ ಸಂದರ್ಭದಲ್ಲಿ ವೂಡೇ ಪಿ. ಕೃಷ್ಣ, ಬಿ.ಎಲ್. ಶಂಕರ್, ಪ್ರೊ.ಕೆ.ಇ. ರಾಧಾಕೃಷ್ಣ ಸೇರಿದಂತೆ ಇನ್ನಿತರರು ಇದ್ದರು.

ಕರ್ನಾಟಕ VK

ಶನಿವಾರ, 12 ಜನವರಿ 2019, ಬೆಂಗಳೂರು

## ಗಾಂಧಿ ಭವನದಲ್ಲಿ ನಾಡೋಜ ಪಾಟೀಲ ಪುಟ್ಟಪ್ಪ ಜನ್ಮಶತಮಾನೋತ್ಸವ ಆಚರಣೆ

# 'ಪಾಪು' ಕನ್ನಡದ ನೈಜ ಸಾಕ್ಷಿಪ್ರಜ್ಞೆ: ಸಿಎಂ

**ವಿಕ ಸುದ್ದಿಲೋಕ ಬೆಂಗಳೂರು**

ಹಿರಿಯ ಗಾಂಧಿವಾದಿ ಪಾಟೀಲ ಪುಟ್ಟಪ್ಪ ಕನ್ನಡದ ನೈಜ ಸಾಕ್ಷಿಪ್ರಜ್ಞೆ. ನಾಡು-ನುಡಿ ವಿಚಾರದಲ್ಲಿ ಅವರ ಪ್ರಬಲ ಪ್ರತಿಪಾದನೆ ಸರಕಾರಕ್ಕೂ ಮಾರ್ಗದರ್ಶನ ನೀಡಿದೆ ಎಂದು ಸಿಎಂ ಕುಮಾರಸ್ವಾಮಿ ಅಭಿಪ್ರಾಯಪಟ್ಟರು.

ಗಾಂಧಿ ಸ್ಮಾರಕ ನಿಧಿ, ಪಾಟೀಲ ಪುಟ್ಟಪ್ಪ ಜನ್ಮ ಶತಮಾನೋತ್ಸವ ಸಮಿತಿ ಹಾಗೂ ಬಸವ ಸಮಿತಿ ಜಂಟಿಯಾಗಿ ಏರ್ಪಡಿಸಿದ್ದ ನಾಡೋಜ ಪಾಟೀಲ ಪುಟ್ಟಪ್ಪ ಜನ್ಮ ಶತಮಾನೋತ್ಸವ ಸಮಾರಂಭಕ್ಕೆ ಸಿಎಂ ಗೈರಿನಲ್ಲಿ ಅವರ ಲಿಖಿತ ಭಾಷಣವನ್ನು ಸಚಿವ ವೆಂಕಟರಾವ್ ನಾಡಗೌಡ ಓದಿದರು.

''ನಾಡಿನ ಹಿರಿಯ ಚೇತನರಲ್ಲಿ ಒಬ್ಬರಾದ ಪಾಪು ತಾವು ನಂಬಿದ ತತ್ತ್ವ-ಸಿದ್ಧಾಂತಕ್ಕೆ ಸದಾ ಕಟಿಬದ್ಧರಾಗಿದ್ದಾರೆ. ರಾಜ್ಯಪಾಲ, ಸಿಎಂ ಸಹಿತ ಗಣ್ಯರ ಹಾಜರಿ ನೋಡದೆ ಮುಲಾಜಿಲ್ಲದೆ ಕನ್ನಡದ ಬಗ್ಗೆ ನಿಲುವು ವ್ಯಕ್ತಪಡಿಸುತ್ತಿದ್ದರು. ಕನ್ನಡ ಕಾವಲು ಸಮಿತಿ ಅಧ್ಯಕ್ಷರಾಗಿ ಅವರು ಮಾಡಿದ ಕೆಲಸದಿಂದಾಗಿ ಇಂದು ಆಡಳಿತದಲ್ಲಿ ಕನ್ನಡ ಜಾರಿಯಲ್ಲಿದೆ,'' ಎಂದು ಸ್ಮರಿಸಿದರು.

**ಭಾಷೆ ಮಟ್ಟಿಗೆ ಪಾಪು ನಾಯಕ**

ಚಿತ್ರಕಲಾ ಪರಿಷತ್ ಅಧ್ಯಕ್ಷ ಬಿ.ಎಲ್.ಶಂಕರ್ ಮಾತನಾಡಿ ''ಕನ್ನಡದ ವಿಚಾರದಲ್ಲಿ ಪಾಟೀಲ ಪುಟ್ಟಪ್ಪನವರ ನಿಲುವೇ ರಾಜ್ಯ ಸರಕಾರದ ಅಭಿಪ್ರಾಯ ಆಗಿರುತ್ತಿತ್ತು. ಅಷ್ಟರ ಮಟ್ಟಿಗೆ ಅವರಲ್ಲಿ ಕನ್ನಡ ಹಾಸುಹೊಕ್ಕಾಗಿತ್ತು. ನಮ್ಮ ಭಾಷೆ ಮಟ್ಟಿಗೆ ಪಾಪು ನಾಯಕ,'' ಆಗಿದ್ದಾರೆ ಎಂದರು.



ಬೆಂಗಳೂರಿನಲ್ಲಿ ಶುಕ್ರವಾರ ನಡೆದ ನಾಡೋಜ ಪಾಟೀಲ್ ಪುಟ್ಟಪ್ಪ ಅವರ ಶತಮಾನೋತ್ಸವ ಕಾರ್ಯಕ್ರಮದಲ್ಲಿ 'ಪಾಪು' ಅವರನ್ನು ಸನ್ಮಾನಿಸಲಾಯಿತು. ಸಚಿವ ವೆಂಕಟ ನಾಡಗೌಡ, ಐಜಿ ಸನದಿ, ಅರವಿಂದ ಜತ್ತಿ, ವೂಡೇ ಕೃಷ್ಣ ಎಂ.ವಿ.ರಾಜಶೇಖರನ್, ಎಚ್.ಹನುಮಂತಪ್ಪ, ಮತ್ತಿತರರಿದ್ದರು.

ಪಾಪು ಮಾತಿನಲ್ಲಿ ನಿಷ್ಠೂರತೆ ಇದ್ದರೂ ಅದರ ಹಿಂದೆ ಸಮಷ್ಟಿಯ ಹಿತ ಅಡಗಿರುತ್ತದೆ. ಬುದ್ಧ ಅಪದ್ಧ ಹೇಳಿದರೂ ಒಪ್ಪದ ಛಾತಿ ಇವರದು. ರಾಜ್ಯದಲ್ಲಿ ಯಾವ ಸರಕಾರ ಬಂದರೂ ಅವರ ಉಸಿರು ಕನ್ನಡ.

**- ಗೊ.ರು.ಚನ್ನಬಸಪ್ಪ**
ಹಿರಿಯ ಸಾಹಿತಿ

ಪಾಟೀಲ ಪುಟ್ಟಪ್ಪನವರ ಜೀವನದ ಹಿಂದಣದ ಹೆಜ್ಜೆಗಳು ನಮ್ಮ ಮುಂದಣದ ಹೆಜ್ಜೆಯಾಗಲಿ. ಗಾಂಧೀಜಿಯವರ ನನ್ನ ಜೀವನವೇ ನನ್ನ ಸಂದೇಶ ಎಂಬುದನ್ನು ಪಾಪು ಕೂಡ ಪರಿಪಾಲಿಸಿ ಮಾದರಿಯಾಗಿದ್ದಾರೆ

**- ಅರವಿಂದ ಜತ್ತಿ**, ಬಸವ ಸಮಿತಿ ಅಧ್ಯಕ್ಷ

''ಪ್ರತಿ ಜಿಲ್ಲೆಯಲ್ಲಿ ಸರಕಾರ ಸಮುದಾಯ ಭವನ ಬದಲು ಮ್ಯೂಸಿಯಂ ನಿರ್ಮಿಸಬೇಕು. ಅಲ್ಲಿ ಜಿಲ್ಲೆಯ ಅಭಿವೃದ್ಧಿಗೆ ಶ್ರಮಿಸಿದ, ಹೋರಾಟಗಾರರ ಸಾಧನೆಯನ್ನು ತಿಳಿಸುವ ಕೇಂದ್ರವಾಗಿ ರೂಪಗೊಂಡು ಮುಂದಿನ ಪೀಳಿಗೆಯವರಿಗೆ ತಿಳಿವಳಿಕೆ ಮೂಡಿಸಬೇಕು. ಗಾಂಧೀಜಿಯವರ 150ನೇ ವರ್ಷಾಚರಣೆ ಹಿನ್ನೆಲೆಯಲ್ಲಿ ಸರಕಾರದ ಸಾಮಗ್ರಿಗಳ ಮೇಲೆ 'ಗಾಂಧಿ-150' ಲೋಗೊ ಬಳಸಲಿ,'' ಎಂದು ಬಿ.ಎಲ್.ಶಂಕರ್ ತಿಳಿಸಿದರು.

ಕೇಂದ್ರದ ಮಾಜಿ ಸಚಿವ ಎಂ.ವಿ.ರಾಜಶೇಖರನ್, ಮಾಜಿ ಸಂಸದರಾದ ಎಚ್.ಹನುಮಂತಪ್ಪ, ಐ.ಜಿ.ಸನದಿ, ಕೃಷಿ ವಿವಿ ವಿಶ್ರಾಂತ ಕುಲಪತಿ ಡಾ.ಮಹದೇವಪ್ಪ, ಬಸವ ಸಮಿತಿ ಅಧ್ಯಕ್ಷ ಅರವಿಂದ ಜತ್ತಿ, ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ವೂಡೇ ಪಿ ಕೃಷ್ಣ ಮತ್ತಿತರರಿದ್ದರು.

### ಅಮೆರಿಕದಲ್ಲಿ ಗಾಂಧಿ ಟೋಪಿ ಧರಿಸಿದ್ದೆ!

''ಬ್ಯಾಡಗಿ ಶಾಲೆಯಲ್ಲಿ ಕಲಿಕೆ ವೇಳೆ ಗಾಂಧೀಜಿಯನ್ನು ಭೇಟಿಯಾಗಿದ್ದೆ. ಅಂದಿನಿಂದ ಈವರೆಗೆ ಖಾದಿ ಬಟ್ಟೆಯನ್ನೇ ಧರಿಸುತ್ತಿರುವೆ. ಶಾಲೆಯಲ್ಲೊಮ್ಮೆ ಖಾದಿ ಧರಿಸಿದ್ದಕ್ಕೆ ವಿರೋಧಿಸಿದಾಗ ಬೆತ್ತಲೆ ಇರುವುದಾಗಿ ಹಠ ಹಿಡಿದ ಬಳಿಕ ಶಿಕ್ಷಕರು ಸುಮ್ಮನಾಗಿದ್ದರು. ಅಮೆರಿಕಗೆ ಹೋದಾಗಲೂ ಗಾಂಧಿ ಟೋಪಿಯನ್ನೇ ಧರಿಸುತ್ತಿದ್ದೆ. ಗಾಂಧಿ ತತ್ತ್ವಗಳು ನನ್ನ ಜೀವನದಲ್ಲಿ ಹಾಸು ಹೊಕ್ಕಾಗಿದೆ,'' ಎಂದು ನಾಡೋಜ ಪಾಟೀಲ ಪುಟ್ಟಪ್ಪ ಅಭಿನಂದನೆ ಸ್ವೀಕರಿಸಿದ ಬಳಿಕ ಪ್ರತಿಕ್ರಿಯಿಸಿದರು.

ಪ್ರಜಾವಾಣಿ

ಶನಿವಾರ • ಜನವರಿ 12, 2019

# ಶತಾಯುಷಿ ಪುಟ್ಟಪ್ಪಗೆ ಸನ್ಮಾನ

ಪ್ರಜಾವಾಣಿ ವಾರ್ತೆ

ಬೆಂಗಳೂರು: ಜನ್ಮ ಶತಮಾನೋತ್ಸವ ಆಚರಿಸಿಕೊಂಡ ಗಾಂಧಿ ಪಥದ ಚಿಂತಕ, ಹಿರಿಯ ಪತ್ರಕರ್ತ ಪಾಟೀಲ ಪುಟ್ಟಪ್ಪ ಅವರಿಗೆ ಶುಕ್ರವಾರ ಆತ್ಮೀಯವಾಗಿ ಅಭಿನಂದಿಸಲಾಯಿತು.

ಕರ್ನಾಟಕ ಗಾಂಧಿ ಸ್ಮಾರಕ ನಿಧಿ, ಪಾಟೀಲ ಪುಟ್ಟಪ್ಪ ಜನ್ಮಶತಮಾನೋತ್ಸವ ಸಮಿತಿ, ಬಸವ ಬಳಗದ ವತಿಯಿಂದ ಹಮ್ಮಿಕೊಂಡ ಈ ಸಮಾರಂಭದಲ್ಲಿ ಪುಟ್ಟಪ್ಪ ಅವರ ಬದುಕಿನ ವಿವಿಧ ಮಜಲುಗಳನ್ನು ಗಣ್ಯರು ಕೊಂಡಾಡಿದರು. ಬದುಕಿನಲ್ಲಿ ಅಳವಡಿಸಿಕೊಂಡ ಗಾಂಧಿ ಚಿಂತನೆಯನ್ನು ಪ್ರಶಂಸಿಸಿದರು.

ಸನ್ಮಾನ ಸ್ವೀಕರಿಸಿ ಮಾತನಾಡಿದ ಪುಟ್ಟಪ್ಪ, '1930ರಲ್ಲಿ ಗಾಂಧಿ ಅವರು ಬ್ಯಾಡಗಿಗೆ ಬಂದಿದ್ದರು. ಅವರಿಂದ ಪ್ರಭಾವಿತನಾದೆ. ಅಂದಿನಿಂದಲೇ ನಾನು ಖಾದಿ ಬಟ್ಟೆಯನ್ನೇ ತೊಡಬೇಕು ಎಂದು ತೀರ್ಮಾನಿಸಿದೆ. ಖಾದಿ ಬಟ್ಟೆಗಳನ್ನೇ ತಂದು ಕೊಡಬೇಕು ಎಂದು ನನ್ನ ಹಿರಿಯರಿಗೆ ತಾಕೀತು ಮಾಡಿದೆ. ಹಿರಿಯರು ಖಾದಿ ಬಟ್ಟೆ ತಂದುಕೊಟ್ಟರು. ಇಂದಿನವರೆಗೂ ಅದೇ ನನ್ನ ದಿರಿಸಾಗಿದೆ' ಎಂದು ಗಾಂಧಿ ಪ್ರಭಾವಿಸಿದ ದಿನಗಳನ್ನು ನೆನಪಿಸಿಕೊಂಡರು.

'ಅಮೆರಿಕನ್ನರಿಗೆ ನಮ್ಮ ದೇಶದ ಬಗ್ಗೆ ತಿಳಿದುಕೊಳ್ಳುವ ಕುತೂಹಲ ಇದೆ. ಶಿಕ್ಷಣಕ್ಕಾಗಿ ನಾನು ಅಮೆರಿಕಕ್ಕೆ ಹೋದಾಗ ಅಲ್ಲಿ ಹಲವರು ಭಾರತದ ಬಗ್ಗೆ ಹೇಳಿ ಎಂದು ಪದೇಪದೇ ಕೇಳುತ್ತಿದ್ದರು. ಈ ಅಭಿಮಾನ ನಮ್ಮವರಿಗೂ ನಮ್ಮ ದೇಶದ ಬಗ್ಗೆ ಇರಬೇಕು' ಎಂದರು.



ಪಾಟೀಲ ಪುಟ್ಟಪ್ಪ ಅವರನ್ನು ಅರವಿಂದ ಜತ್ತಿ, ಸಚಿವ ವೆಂಕಟರಾವ್ ನಾಡಗೌಡ ಅವರು ಸನ್ಮಾನಿಸಿದರು. ವಿಶ್ರಾಂತ ಕುಲಪತಿ ಮಹಾದೇವಪ್ಪ, ಬಸಂತಕುಮಾರ್ ಪಾಟೀಲ, ಗೋ.ರು.ಚನ್ನಬಸಪ್ಪ, ವೂಡೆ ಪಿ. ಕೃಷ್ಣ ಇದ್ದರು

ಪಾಪು ಮಾತಿನ ಧ್ವನಿ ಕ್ಷೀಣಿಸಿರುವುದನ್ನು ಗುರುತಿಸಿದ ಹಿರಿಯ ಸಾಹಿತಿ ಗೊ.ರು.ಚನ್ನಬಸಪ್ಪ,' ಪುಟ್ಟಪ್ಪ ಅಂದರೆ ಮಾತು, ಧ್ವನಿ. ಅವರ ಜತೆ ಇರುವುದೇ ಅದ್ಭುತ ಅನುಭವ. ವಯೋಸಹಜ ಕಾರಣದಿಂದ ಅವರ ಧ್ವನಿ ಕ್ಷೀಣವಾಗಿರುವುದು ನೋವು ತಂದಿದೆ' ಎಂದರು.

ಚಿಂತಕ ಎಚ್.ಹನುಮಂತಪ್ಪ ಮಾತನಾಡಿ,'ದಾವಣಗೆರೆ ಎರಡನೇ ರಾಜಧಾನಿ ಆಗಬೇಕು ಎಂದು 1946ರಲ್ಲೇ ಪುಟ್ಟಪ್ಪ ಅವರು ಧ್ವನಿ ಎತ್ತಿದ್ದರು. ನಾಡ ವಿಭಜನೆಯನ್ನು ಅವರೂ ವಿರೋಧಿಸಿದ್ದರು' ಎಂದು ಸ್ಮರಿಸಿದರು.

ಚಿತ್ರಕಲಾ ಪರಿಷತ್ ಅಧ್ಯಕ್ಷ ಬಿ.ಎಲ್. ಶಂಕರ್ ಮಾತನಾಡಿ, 'ಜಾತಿಗೊಂದು ಸಮುದಾಯ ಭವನ ನಿರ್ಮಿಸುವ ಬದಲು, ಪ್ರತಿ ಜಿಲ್ಲಾ ಕೇಂದ್ರಗಳಲ್ಲಿ ಆ ಪ್ರದೇಶಕ್ಕಾಗಿ ಹೋರಾಡಿದವರ ಮಾಹಿತಿ ನೀಡುವ, ಚರಿತ್ರೆ ಕಟ್ಟಿಕೊಡುವ, ಬೆಳೆ, ಜನಸಂಸ್ಕೃತಿ ನಿರೂಪಿಸುವ ಮ್ಯೂಸಿಯಂ ಸ್ಥಾಪಿಸಲು ಸರ್ಕಾರ ಮುಂದಾಗಬೇಕು' ಎಂದರು.

ಪಶುಸಂಗೋಪನೆ ಹಾಗೂ ಮೀನುಗಾರಿಕಾ ಸಚಿವ ವೆಂಕಟರಾವ್ ನಾಡಗೌಡ ಅವರು ಮುಖ್ಯಮಂತ್ರಿ ಸಂದೇಶ ವಾಚಿಸಿದರು.

ಉದಯವಾಣಿ | ಶನಿವಾರ, ಜನವರಿ 12, 2019

# ಕನ್ನಡಕ್ಕಾಗಿ ಎಲ್ಲವನ್ನೂ ಎದುರಿಸುವ ಪಾಪು

## ಪಾಟೀಲ ಪುಟ್ಟಪ್ಪ ಜನ್ಮಶತಮಾನೋತ್ಸವದಲ್ಲಿ ಮುಖ್ಯಮಂತ್ರಿ ಲಿಖಿತ ಸಂದೇಶ

ಬೆಂಗಳೂರು: ಹಿರಿಯ ಪತ್ರಕರ್ತ ಪಾಟೀಲ ಪುಟ್ಟಪ್ಪ(ಪಾಪು)ಅವರ ಜನ್ಮ ಶತಮಾನೋತ್ಸವವು ನಗರದ ಗಾಂಧಿ ಭವನದಲ್ಲಿ ಶುಕ್ರವಾರ ನಡೆಯಿತು.

ಬಸವ ಸಮಿತಿ, ಡಾ.ನಾಡೋಜ ಪಾಟೀಲ ಪುಟ್ಟಪ್ಪ ಜನ್ಮಶತಮಾನೋತ್ಸವ ಸಮಿತಿ, ಕರ್ನಾಟಕ ಗಾಂಧಿ ಸ್ಮಾರಕ ನಿಧಿವತಿಯಿಂದ ನಡೆದ ಕಾರ್ಯಕ್ರಮದಲ್ಲಿ ಮುಖ್ಯಮಂತ್ರಿ ಎಚ್.ಡಿ.ಕುಮಾರಸ್ವಾಮಿ ಅವರ ಅನುಪಸ್ಥಿತಿಯಲ್ಲಿ ಪಶುಸಂಗೋಪನೆ ಮತ್ತು ಮೀನುಗಾರಿಕೆ ಸಚಿವ ವೆಂಕಟರಾವ್ ನಾಡಗೌಡ ಅವರು ಮುಖ್ಯಮಂತ್ರಿ ಅವರ ಲಿಖಿತ ಸಂದೇಶ ಸಭೆಗೆ ಓದಿ ಹೇಳಿದರು.

ಪಾಪು ಅವರು ಹುಡುಗನಾಗಿದ್ದಾಗ ಮಹಾತ್ಮಗಾಂಧಿ ಅವರು ಬೆಳಗಾವಿ, ಬ್ಯಾಡಗಿಗೆ ಭೇಟಿ ನೀಡಿದ್ದರು. ಆ ವೇಳೆ ಗಾಂಧೀಜಿ ಅವರು ಪಾಪು ಅವರ ಬೆನ್ನು ಸವರಿದ್ದರು. ಅಂದಿನಿಂದ ಪಾಪು ಅವರು ಗಾಂಧೀಜಿಯವರ ಆದರ್ಶಗಳನ್ನು ಮೈಗೂಡಿಸಿಕೊಂಡರು. ತಾನು ನಂಬಿದ ತತ್ವ ಸಿದ್ಧಾಂತದ ಅನುಸರಣೆಯಲ್ಲಿ ಎಂದೂ ರಾಜಿಯಾಗಿಲ್ಲ. ಕನ್ನಡ ಕಾವಲು ಸಮಿತಿ ಅಧ್ಯಕ್ಷರಾಗಿ ಪಾಪು ಅವರು ಮಾಡಿದ ಕೆಲಸದಿಂದಲೇ ಇವತ್ತು ಆಡಳಿತದಲ್ಲಿ ಕನ್ನಡ ಗಟ್ಟಿಯಾಗಿದೆ ಎಂದು ತಮ್ಮ ಸಂದೇಶದಲ್ಲಿ ಉಲ್ಲೇಖಿಸಿದ್ದರು.

ವಿಧಾನ ಪರಿಷತ್ ಮಾಜಿ ಸಭಾಪತಿ ಬಿ.ಎಲ್.ಶಂಕರ್ ಮಾತನಾಡಿ, ಜಿಲ್ಲೆಯಲ್ಲಿ ಸಮುದಾಯ ಭವನಕ್ಕೆ ಮೀಸಲಿಟ್ಟ ಹಣದಲ್ಲಿ ಜಿಲ್ಲೆಗೊಂದರಂತೆ ವಸ್ತುಸಂಗ್ರಹಾಲಯ ನಿರ್ಮಿಸಲು ಸರ್ಕಾರಕ್ಕೆ ಮನವಿ ಮಾಡಿದರು.

ಜಿಲ್ಲೆ ವ್ಯಾಪ್ತಿಯಲ್ಲಿ ಸಾಹಿತ್ಯ, ಕೃಷಿ, ಸ್ವಾತಂತ್ರ್ಯ ಹೋರಾಟ ಸೇರಿ ವಿವಿಧ ಕ್ಷೇತ್ರಗಳಲ್ಲಿ ಸಾಧನೆ ಮಾಡಿದವರ ಜೀವನ ಚರಿತ್ರೆಯನ್ನು ವಸ್ತುಸಂಗ್ರಹಾಲಯದ ಮೂಲಕ ಪ್ರಚಾರ ಪಡಿಸಬೇಕು. ಸಾಧಕರ ಜನ್ಮದಿನವನ್ನು ಒಟ್ಟಿಗೆ ಆಚರಿಸುವಂತೆ ಆಗಬೇಕು ಎಂದು ಹೇಳಿದರು.

ಹಿರಿಯ ಸಾಹಿತಿ ಗೋ.ರು.ಚನ್ನಬಸಪ್ಪ, ಬಸವ ಸಮಿತಿ ಅಧ್ಯಕ್ಷರಾದ ಅರವಿಂದ ಜತ್ತಿ, ಜನ್ಮಶತಮಾನೋತ್ಸವ ಸಮಿತಿಯ ಸಂಚಾಲಕ ಲೋಹಿತ್ ನಾಯ್ಕರ್, ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ಡಾ.ಹೂಡೇ ಪಿ.ಕೃಷ್ಣ, ಕೇಂದ್ರದ ಮಾಜಿ ಸಚಿವ ಎಂ.ವಿ.ರಾಜಶೇಖರನ್, ಮಾಜಿ ಸಂಸದ ಎಚ್. ಹನುಮಂತಪ್ಪ, ವಿಶ್ರಾಂತ ಕುಲಪತಿ ಡಾ.ಮಹದೇವಪ್ಪ, ಶಿಕ್ಷಣ ತಜ್ಞ ಕೆ.ಇ.ರಾಧಾಕೃಷ್ಣ ಮೊದಲಾದವರು ಉಪಸ್ಥಿತರಿದ್ದರು.



ನಗರದ ಗಾಂಧಿ ಭವನದಲ್ಲಿ ನಡೆದ ಶತಮಾನೋತ್ಸವ ಕಾರ್ಯಕ್ರಮದಲ್ಲಿ ಹಿರಿಯ ಪತ್ರಕರ್ತ ಪಾಟೀಲ ಪುಟ್ಟಪ್ಪ(ಪಾಪು)ಅವರನ್ನು ಸನ್ಮಾನಿಸಲಾಯಿತು. ಸಚಿವ ವೆಂಕಟರಾವ್ ನಾಡಗೌಡ ಇತರರಿದ್ದರು.

> ನಾನೊಬ್ಬ ಗಾಂಧಿವಾದಿ, ಗಾಂಧೀಜಿಯವರ ದರ್ಶನದ ನಂತರ ಖಾದಿ ಬಿಟ್ಟು ಬೇರೆ ಬಟ್ಟೆಯನ್ನೇ ತೊಟ್ಟಿಲ್ಲ. ಅಮೆರಿಕಾಕ್ಕೆ ಹೋದಾಗ ಗಾಂಧಿ ಟೋಪಿ ಧರಿಸಿದ್ದರಿಂದ ಅಲ್ಲಿನವರು ಗಾಂಧಿಯವರ ನಾಡಿನಿಂದ ಬಂದವರು ಎಂದು ಗೌರವಿಸಿದ್ದರು. ನಮ್ಮ ಗುರುಗಳಾದ ಗಂಗಾಧರ ಸವದತ್ತಿಯವರ ಮಾರ್ಗದರ್ಶನವೂ ನನ್ನ ಸಾಧನೆಯ ಹಿಂದಿದೆ
>
> • ಪಾಟೀಲ ಪುಟ್ಟಪ್ಪ, ಹಿರಿಯ ಪತ್ರಕರ್ತ

### ಜ.14ಕ್ಕೆ ಪಾಪು ಜನ್ಮದಿನ

ಪಾಪು ಅವರು ವಿದ್ಯಾರ್ಥಿ ಆಗಿದ್ದಾಗಲೇ ಹೋರಾಟದಲ್ಲಿ ತೊಡಗಿಸಿಕೊಂಡವರು. ಪ್ರಪಂಚ ಮತ್ತು ವಿಶ್ವವಾಣಿ ಎಂಬ ಪತ್ರಿಕೆ ನಡೆಸಿದವರು. ಧಾರವಾಡ ವಿದ್ಯಾವರ್ಧಕ ಸಂಘಕ್ಕೆ ದೀರ್ಘಕಾಲ ಅಧ್ಯಕ್ಷರಾಗಿದ್ದರು. ಜ.14ರಂದು ಅವರಿಗೆ ನೂರು ವರ್ಷ ತುಂಬಲಿದೆ. ಇದರ ಅಂಗವಾಗಿ ಕಾಸರಗೋಡು, ದೆಹಲಿ, ಧಾರವಾಡ ವಿವಿಧೆಡೆ ಜನ್ಮಶತಮಾನೋತ್ಸವ ಹಮ್ಮಿಕೊಂಡಿದ್ದೇವೆ. ಪಾಪು ವ್ಯಕ್ತಿ, ಶಕ್ತಿ ಎಂಬ ಆತ್ಮಚರಿತ್ರೆ ಬಿಡುಗಡೆ ಮಾಡಲಾಗುತ್ತಿದೆ. 6 ಕಡೆ ವಿಚಾರ ಸಂಕಿರಣಗಳು ನಡೆಯಲಿದೆ ಎಂದು ಸಮಿತಿ ಸಂಚಾಲಕ ಲೋಹಿತ್ ನಾಯ್ಕರ್ ಹೇಳಿದರು.

ಸಂಯುಕ್ತ ಕರ್ನಾಟಕ

ಶನಿವಾರ, 12, ಜನವರಿ, 2019

# ಗಾಂಧಿಯ ಆದರ್ಶದಲ್ಲಿ ಪಾಪು

[illegible]

ಸತ್ಯ, ಅಹಿಂಸೆಯ ಮಾರ್ಗದಲ್ಲಿ ಸಾಗಿದ ಗಾಂಧೀಜಿಯ ತತ್ವ ಆದರ್ಶಗಳನ್ನು ತಮ್ಮ ಜೀವನದಲ್ಲಿ ಅಳವಡಿಸಿಕೊಂಡು ಬದುಕಿದವರು ನಾಡೋಜ ಡಾ. ಪಾಟೀಲ ಪುಟ್ಟಪ್ಪನವರು ಎಂದು ಹಿರಿಯ ಸಾಹಿತಿ ಡಾ. ಗೊ.ರು. ಚನ್ನಬಸಪ್ಪ ಬಣ್ಣಿಸಿದರು.

ಗಾಂಧಿ ಭವನದಲ್ಲಿ ಗಾಂಧಿ ಸ್ಮಾರಕ ನಿಧಿ ಹಾಗೂ ಬಸವ ಸಮಿತಿ ಸಹಯೋಗದೊಂದಿಗೆ ಆಯೋಜಿಸಿದ್ದ ಡಾ. ಪಾಟೀಲ ಪುಟ್ಟಪ್ಪನವರ ಜನ್ಮಶತಮಾನೋತ್ಸವ ಸಮಾರಂಭದಲ್ಲಿ ಮಾತನಾಡಿ, ಗಾಂಧಿಯವರ ಸ್ಪರ್ಶ ಕಂಡ ಪುಟ್ಟಪ್ಪನವರು ನೇರ ನಡೆ, ನುಡಿಯ ನಿಷ್ಠುರವಾದಿಗಳು. ಅವರ ಮಾತಿನಂತೆ ಬರವಣಿಗೆಯೂ ಅಷ್ಟೇ ಮೊನಚು. ಯಾವುದೇ ಸರ್ಕಾರಕ್ಕೂ ಜಗ್ಗದೆ, ಯಾವ ಅಧಿಕಾರಿಯ ಮಾತಿಗೂ ಬಗ್ಗದೆ ಎಲ್ಲವನ್ನು ಪರಾಮರ್ಶಿಸಿ ಲೋಕದ ಒಳಿತಿಗಾಗಿ ಯಾವುದು ಒಳ್ಳೆಯದಿದೆಯೋ ಅದನ್ನು ಪ್ರತಿಪಾದಿಸುವ ಪುಟ್ಟಪ್ಪನವರ ಜೀವನವೇ ನಮಗೆಲ್ಲ ಆದರ್ಶ ಎಂದರು.

ಕೇಂದ್ರ ಮಾಜಿ ಸಚಿವ ಎಂ.ವಿ. ರಾಜಶೇಖರನ್ ಮಾತನಾಡಿ, ಅಖಂಡ ಕರ್ನಾಟಕ ಏಕೀಕರಣದ ರೂವಾರಿಗಳಾದ ಪುಟ್ಟಪ್ಪನವರು ಪ್ರಪಂಚ, ವಿಶ್ವವಾಣಿ ಪತ್ರಿಕೆಗಳ ಮೂಲಕ ಕನ್ನಡ ನಾಡಿಗೆ ವಿಶಿಷ್ಟವಾದ ಕೊಡುಗೆ ನೀಡಿದವರು ಎಂದು ತಿಳಿಸಿದರು.

ಬಸವ ಸಮಿತಿ ಅಧ್ಯಕ್ಷ ಅರವಿಂದ ಜತ್ತಿ ಮಾತನಾಡಿ, ಪುಟ್ಟಪ್ಪನವರ ಜೀವನವೇ ನಮಗೆ ಸಂದೇಶ. ಯಾವುದೇ ದಾಕ್ಷಿಣ್ಯಪರರಲ್ಲದೆ ಸತ್ಯಪಥಿಕರಾಗಿ ಪತ್ರಿಕೋದ್ಯಮ ನಿರ್ವಹಿಸಿದವರು ಪಾಪು ಎಂದರು.

ಮಾಜಿ ಸಚಿವ ಬಿ.ಎಲ್. ಶಂಕರ್ ಮಾತನಾಡಿ, ಸಮಾಜಮುಖಿಯಾಗಿ ಕಾರ್ಯ ಮಾಡಿದ ಇಂತಹ ಮಹನೀಯರ ಜೀವನಾದರ್ಶಗಳನ್ನು ಮುಂದಿನ ಪೀಳಿಗೆಗೆ ತಿಳಿಸುವ ನಿಟ್ಟಿನಲ್ಲಿ ಸರ್ಕಾರ ಕಾರ್ಯ ಮಾಡಬೇಕೆಂದ ಅವರು, ಕನ್ನಡ ನಾಡು ನುಡಿಗೆ ಏನೇ ಧಕ್ಕೆ ಬಂದರೂ ಆ ಕ್ಷಣ ಅದರ ವಿರುದ್ಧ ಧ್ವನಿ ಎತ್ತುವ ಪುಟ್ಟಪ್ಪನವರ ನಿಲುವೇ ಕನ್ನಡಿಗರ ನಿಲುವಾಗಿತ್ತು ಎಂದರು.

ಇದೇ ಸಂದರ್ಭದಲ್ಲಿ ನೂರು ವಸಂತಗಳನ್ನು ಕಂಡ ಡಾ. ಪಾಟೀಲ ಪುಟ್ಟಪ್ಪನವರನ್ನು ಸನ್ಮಾನಿಸಿ ಗೌರವಿಸಲಾಯಿತು. ಮಾಜಿ ಸಂಸದರಾದ ಐ.ಜಿ. ಸನದಿ, ಹನುಮಂತಪ್ಪ, ಗಾಂಧಿ ಪ್ರತಿಷ್ಠಾನ ಅಧ್ಯಕ್ಷ ವೊಡೇ ಪಿ. ಕೃಷ್ಣ ಮತ್ತಿತರರಿದ್ದರು.



ಗಾಂಧಿ ಭವನದಲ್ಲಿ ಆಯೋಜಿಸಿದ್ದ ಪಾಪು ಜನ್ಮಶತಮಾನೋತ್ಸವ ಸಮಾರಂಭದಲ್ಲಿ ನಾಡೋಜ ಡಾ. ಪಾಟೀಲ ಪುಟ್ಟಪ್ಪನವರನ್ನು ಸನ್ಮಾನಿಸಲಾಯಿತು. ಸಾಹಿತಿ ಗೊ.ರು. ಚನ್ನಬಸಪ್ಪ, ಸಚಿವ ವೆಂಕಟರಾವ್ ನಾಡಗೌಡ, ಮಾಜಿ ಕೇಂದ್ರ ಸಚಿವ ಎಂ.ವಿ. ರಾಜಶೇಖರನ್, ಬಸವ ಸಮಿತಿ ಅಧ್ಯಕ್ಷ ಅರವಿಂದ ಜತ್ತಿ, ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ವೊಡೇ ಪಿ. ಕೃಷ್ಣ ಮತ್ತಿತರರಿದ್ದರು.

ಘನ ವ್ಯಕ್ತಿತ್ವ ಹೊಂದಿದ ಪುಟ್ಟಪ್ಪನವರು ಕನ್ನಡ ಕಾವಲು ಸಮಿತಿಯ ಅಧ್ಯಕ್ಷರಾಗಿ ಕಾರ್ಯ ಮಾಡಿದವರು. ಕನ್ನಡದ ಉಳಿವಿಗಾಗಿ ಅವರು ಬರೆದ ಪತ್ರಗಳ ಸಂಖ್ಯೆ ಹತ್ತು ಸಾವಿರ. ಹಲವಾರು ಶ್ರೇಷ್ಠ ಪತ್ರಿಕೆಗಳಲ್ಲಿ ಪತ್ರಕರ್ತರಾಗಿ ನೇರ ಬರಹದಿಂದ ಸಮಾಜವನ್ನು ತಿದ್ದುವ ಕಾರ್ಯ ಮಾಡಿರುವ ಅವರ ಬರವಣಿಗೆ ತೂಕದ ಬರವಣಿಗೆ. ಪತ್ರಿಕೋದ್ಯಮವೆಂದರೆ ಸತ್ಯ ಮತ್ತು ಪ್ರೀತಿಗಳೆಂಬ ದೇವರ ಆರಾಧನೆ ಎಂದು ನಂಬಿರುವ ಅವರ ಬದುಕಿನ ದಾರಿ ನಮಗೆಲ್ಲ ಆದರ್ಶ ಎಂದು ಮುಖ್ಯಮಂತ್ರಿ ಕುಮಾರಸ್ವಾಮಿ ಕಳುಹಿಸಿದ್ದ ಸಂದೇಶವನ್ನು ಸಚಿವ ವೆಂಕಟರಾವ್ ನಾಡಗೌಡ ವಾಚಿಸಿದರು.

ನಾನು ಮೊದಲಿನಿಂದಲೂ ಗಾಂಧಿವಾದಿ. ಯಾವುದೇ ಬೇರೆ ಆಕರ್ಷಣೆಗಳಿಗೆ ಒಳಗಾದವನಲ್ಲ. 1930ರಲ್ಲಿ ಗಾಂಧೀಜಿ ಹಾವೇರಿ ಜಿಲ್ಲೆಯ ಬ್ಯಾಡಗಿಗೆ ಬಂದಾಗ ಅವರನ್ನು ಸ್ವಾಗತಿಸಲು ನಿಂತ ಯುವಕರಲ್ಲಿ ನಾನೂ ಒಬ್ಬನಾಗಿದ್ದೆ. ಆಗ ಮಹಾತ್ಮರ ಸ್ಪರ್ಶ ನನಗಾಯಿತು. ಅವರ ಆ ಸ್ಪರ್ಶ ನನ್ನಲ್ಲಿ ರೋಮಾಂಚನ ಉಂಟುಮಾಡಿತು. ಇನ್ನುಮುಂದೆ ನಾನು ವಸ್ತ್ರ ಧರಿಸುವುದಾದರೆ ಖಾದಿಯನ್ನೇ ಧರಿಸುತ್ತೇನೆ ಮತ್ತು ಗಾಂಧಿಯವರ ತತ್ವ, ಆದರ್ಶಗಳೇ ನನ್ನ ಜೀವನಾದರ್ಶವಾಗಬೇಕು ಎಂದು ಪ್ರತಿಜ್ಞೆ ಮಾಡಿದೆ. ಅದರಂತೆ ಇಂದಿಗೂ ನಡೆಯುತ್ತಿದ್ದೇನೆ. ಗಾಂಧಿ ಸ್ಮರಣೆಯ ಹಾದಿಯೇ ನನ್ನ ಸಾಧನೆಗೆ ಮೆಟ್ಟಿಲಾಯಿತು.

–ನಾಡೋಜ ಡಾ.ಪಾಟೀಲ್ ಪುಟ್ಟಪ್ಪ

ಸುವರ್ಣ ಟೈಮ್ಸ್ ಆಫ್ ಕರ್ನಾಟಕ

ಶನಿವಾರ, 12 ಜನವರಿ 2019



## ಸನ್ಮಾನ...

ಬೆಂಗಳೂರು: ನಗರದ ಗಾಂಧೀಭವನದಲ್ಲಿ ಶುಕ್ರವಾರ ನಡೆದ ನಾಡೋಜ ಡಾ: ಪಾಟೀಲ ಪುಟ್ಟಪ್ಪ ಜನ್ಮದಿನೋತ್ಸವ ಕಾರ್ಯಕ್ರಮದಲ್ಲಿ ಪಾಪು ಅವರನ್ನು ಸನ್ಮಾನಿಸಲಾಯಿತು. ಸಚಿವ ಎಂ.ಪಿ. ನಾಡಗೌಡ, ಮಾಜಿ ಕೇಂದ್ರ ಸಚಿವ ಎಂ.ವಿ. ರಾಜಶೇಖರನ್, ಮಾಜಿ ಸಂಸದ ಹನುಮಂತಪ್ಪ, ಬಿ.ಎಲ್. ಶಂಕರ್, ವೂಡೆ ಪಿ. ಕೃಷ್ಣ ಮತ್ತಿತರರು ಉಪಸ್ಥಿತರಿದ್ದರು.



ಗಾಂಧಿಭವನದಲ್ಲಿಂದು ನಡೆದ ಕಾರ್ಯಕ್ರಮದಲ್ಲಿ ಶತಾಯುಷಿ ನಾಡೋಜ ಡಾ. ಪಾಟೀಲ ಪುಟ್ಟಪ್ಪ ಅವರನ್ನು ಸಚಿವ ವೆಂಕಟರಾವ್ ನಾಡಗೌಡ ಸನ್ಮಾನಿಸಿದರು. ಗಾಂಧಿ ಭವನದ ಅಧ್ಯಕ್ಷ ವೂಡೆ.ಪಿ.ಕೃಷ್ಣ, ಗೊ.ರು.ಚನ್ನಬಸಪ್ಪ ಬಿ.ಎಲ್. ಶಂಕರ್, ಎಂ.ವಿ.ರಾಜಶೇಖರನ್, ಬಸಂತ್ ಕುಮಾರ್ ಪಾಟೀಲ್, ಹನುಮಂತಪ್ಪ,ಕೆ.ಇ. ರಾಧಾಕೃಷ್ಣ ಮತ್ತಿತರ ಗಣ್ಯರು ಪಾಲ್ಗೊಂಡಿದ್ದರು. ವರದಿ ಪುಟ 2

# ಪಾಪುರಿಂದಲೇ ಆಡಳಿತದಲ್ಲಿ ಕನ್ನಡ: ಸಿಎಂ

ಬೆಂಗಳೂರು, ಜ.11- ನಾಡಿನ ಸಾಕ್ಷಿ ಪ್ರಜ್ಞೆ, ಹಿರಿಯ ಪತ್ರಕರ್ತ ಹಾಗೂ ಮಾಜಿ ಸಂಸದ ಪಾಟೀಲ ಪುಟ್ಟಪ್ಪ ಅವರ ಜನ್ಮ ಶತಮಾನೋತ್ಸವವನ್ನು ನಗರದ ಗಾಂಧಿಭವನದಲ್ಲಿ ಅರ್ಥಪೂರ್ಣವಾಗಿ ಆಚರಿಸಲಾಯಿತು.

ಬಸವ ಸಮಿತಿ, ಡಾ.ನಾಡೋಜ ಪಾಟೀಲ ಪುಟ್ಟಪ್ಪ ಜನ್ಮಶತಮಾನೋತ್ಸವ ಸಮಿತಿ, ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಸಂಯುಕ್ತವಾಗಿ ಆಯೋಜಿಸಿದ್ದ ಪಾಟೀಲ ಪುಟ್ಟಪ್ಪ ಅವರ ಜನ್ಮಶತಮಾನೋತ್ಸವದಲ್ಲಿ ಮಹಾತ್ಮಗಾಂಧೀಜೀ ಅವರ ಆದರ್ಶಗಳ ಮಂಥನ ನಡೆಯಿತು.

ಮುಖ್ಯಮಂತ್ರಿ ಎಚ್.ಡಿ.ಕುಮಾರಸ್ವಾಮಿ ಅವರ ಗೈರು ಹಾಜರಿಯಲ್ಲಿ ಪಶುಸಂಗೋಪನೆ ಮತ್ತು ಮೀನುಗಾರಿಕೆ ಸಚಿವರಾದ ವೆಂಕಟರಾವ್ ನಾಡಗೌಡ ಅವರು ಮುಖ್ಯಮಂತ್ರಿ ಅವರ ಶುಭ ಸಂದೇಶವನ್ನು ಸಭೆಗೆ ಓದಿ ಹೇಳಿದರು.

ಸಂದೇಶದಲ್ಲಿ ಮುಖ್ಯಮಂತ್ರಿ ಅವರು ಪಾಟೀಲಪುಟ್ಟಪ್ಪ ಅವರ ಸಾಧನೆಗಳನ್ನು ಕೊಂಡಾಡಿದರು. ನಾಡಿನ ಹಿರಿಯ ಚೇತನರಲ್ಲಿ ಪಾಪು ಒಬ್ಬರು. ಪಾಪು ಚಿಕ್ಕ ಹುಡುಗನಾಗಿದ್ದಾಗ ಮಹಾತ್ಮಗಾಂಧಿ ಅವರು ಹಾವೇರಿ ಜಿಲ್ಲೆ ಬ್ಯಾಡಗಿಗೆ ಭೇಟಿ ನೀಡಿದ್ದರು. ಆ ವೇಳೆ ಗಾಂಧೀಜಿ ಅವರು ಪಾಪು ಅವರ ಬೆನ್ನು ತಟ್ಟಿದ್ದರು. ಅಂದಿನಿಂದ ಪಾಪು ಅವರು ಗಾಂಧೀಜಿಯ ಆದರ್ಶಗಳನ್ನು ಮೈಗೂಡಿಸಿಕೊಂಡರು. ತಾನು ನಂಬಿದ ತತ್ವ ಸಿದ್ಧಾಂತದ ಅನುಸರಣೆಯಲ್ಲಿ ಎಂದು ರಾಜಿಯಾಗಿಲ್ಲ. ಕನ್ನಡ ಕಾವಲು ಸಮಿತಿ ಅಧ್ಯಕ್ಷರಾಗಿ ಪಾಪು ಮಾಡಿದ ಕೆಲಸದಿಂದಲೇ ಇವತ್ತು ಆಡಳಿತದಲ್ಲಿ ಕನ್ನಡ ಜಾರಿಯಲ್ಲಿದೆ ಎಂದು ಮುಖ್ಯಮಂತ್ರಿ ಅವರು ತಮ್ಮ ಸಂದೇಶದಲ್ಲಿ ತಿಳಿಸಿದ್ದಾರೆ.

ಕನ್ನಡದ ವಿಷಯದಲ್ಲಿ ಪಾ.ಪು. ಅವರದು ದಿಟ್ಟ ನಿಲುವು. ರಾಜ್ಯಪಾಲರು, ಮುಖ್ಯಮಂತ್ರಿ, ಪ್ರಭಾವಿ ಸಚಿವರು ಸೇರಿದಂತೆ ಯಾರನ್ನು ನೋಡದೆ ಮುಲಾಜಿಲ್ಲದೆ ತಮ್ಮ ಅಭಿಪ್ರಾಯಗಳನ್ನು ಹೇಳುತ್ತಿದ್ದರು. ಕನ್ನಡಕ್ಕಾಗಿ ಎಂತಹವರನ್ನಾದರೂ ಎದುರಿಸಬಲ್ಲರು ಎಂಬುದು ಜನ ಜನಿತವಾಗಿವಾಗಿದೆ ಎಂದಿದ್ದಾರೆ.

ಕನ್ನಡದ ಉಳಿವಿಗಾಗಿ ಪಾಪು 10 ಸಾವಿರಕ್ಕೂ ಹೆಚ್ಚು ಪತ್ರ ಬರೆದಿದ್ದಾರೆ ಎಂದರೆ ಅವರ ಕನ್ನಡ ಪ್ರೇಮ ಎಂತಹದ್ದು ಎಂದು ಗೊತ್ತಾಗಲಿದೆ. ಯಶಸ್ವಿ ಪತ್ರಕರ್ತರಾಗಿದ್ದ ಪಾಪು ಅವರು ವಿದೇಶದಲ್ಲಿ ವ್ಯಾಸಂಗ ಮಾಡುವಾಗ ಅವರ ಗುರುಗಳು, ಪಾಪುರಿಗೆ. ನಾವು ಏನು ಕಲಿಸಿದ್ದೇವೋ ಗೊತ್ತಿಲ್ಲ, ಆದರೆ ಅವರಿಂದ ನಾವು ತುಂಬಾ ಕಲಿತಿದ್ದೇವೆ ಎಂದಿದ್ದರು. ಇದು ಪಾಪು ಅವರ ಪ್ರೌಢಿಮೆಗೆ ಸಾಕ್ಷಿಯಾಗಿದೆ ಎಂದು ಶ್ಲಾಘಿಸಿದರು.

ಪ್ರಪಂಚ, ವಿಶ್ವವಾಣಿ ಸೇರಿದಂತೆ ಪಾಪು ಹಲವಾರು ಪತ್ರಿಕೆಗಳನ್ನು ಹುಟ್ಟುಹಾಕಿದರು. ನಿಷ್ಠುರ, ತೂಕದ ಬರವಣಿಗೆ ಮೂಲಕ ನಾಡಿನ ಹಲವಾರು ಸಮಸ್ಯೆಗಳಿಗೆ ಪರಿಹಾರ ಸೂಚಿಸುತ್ತಿದ್ದಾರೆ. ಮೊನಚು ಭಾಷಣದ ಪ್ರಾವೀಣ್ಯತೆ ಅವರದು ಎಂದಿದ್ದಾರೆ.

ಸ್ವಾತಂತ್ರ ಹೋರಾಟಗಾರರಾಗಿ, ರಾಜ್ಯಸಭೆ ಸದಸ್ಯರಾಗಿ, ಪತ್ರಕರ್ತರಾಗಿ ಎಲ್ಲ ಕ್ಷೇತ್ರಗಳಲ್ಲಿ ಅವರು ತಮ್ಮನ್ನು ತಾವು ತೊಡಗಿಸಿಕೊಂಡರು. ಗೋಕಾಕ್, ಕ್ವಿಟ್ ಇಂಡಿಯಾ ಸೇರಿ ಹಲವಾರು ಚಳವಳಿಗಳಲ್ಲಿ ಭಾಗವಹಿಸಿದ್ದರು ಎಂದು ಮುಖ್ಯಮಂತ್ರಿ ಅವರು ಸ್ಮರಿಸಿಕೊಂಡ ಲಿಖಿತ ಸಂದೇಶವನ್ನು ಸಚಿವರು ವೇದಿಕೆಯಲ್ಲಿ ಓದಿದರು. ವಿಧಾನ ಪರಿಷತ್‌ನ ಮಾಜಿ ಸಭಾಪತಿ ಬಿ.ಎಲ್.ಶಂಕರ್, ಜಿಲ್ಲೆಯಲ್ಲಿ ಸಮುದಾಯ ಭವನಕ್ಕೆ ಮೀಸಲಿಟ್ಟ ಹಣದಲ್ಲಿ ಜಿಲ್ಲೆಗೊಂದರಂತೆ ಮ್ಯೂಸಿಯಂ ಮಾಡಲು ಸರ್ಕಾರಕ್ಕೆ ಸಲಹೆ ನೀಡಿದರು. ಎಲ್ಲಾ ಜಿಲ್ಲೆಯಲ್ಲೂ ಸಾಹಿತ್ಯ, ಕೃಷಿ, ಸ್ವಾತಂತ್ರ್ಯ ಹೋರಾಟ ಸೇರಿ ವಿವಿಧ ಕ್ಷೇತ್ರಗಳಲ್ಲಿ ಸಾಧನೆ ಮಾಡಿದ ಅನೇಕರಿದ್ದಾರೆ. ಎಲ್ಲರ ಜೀವನ ಚರಿತ್ರೆಯನ್ನು ಮ್ಯೂಸಿಯಂನಲ್ಲಿ ಪ್ರಚಾರ ಪಡಿಸಬೇಕು. ಎಲ್ಲರ ಜನ್ಮದಿನಾಚರಣೆಯನ್ನು ಒಂದೇ ದಿನ ಹಬ್ಬದ ಮಾದರಿಯಲ್ಲಿ ಆಚರಿಸಬೇಕು ಎಂದು ಸಲಹೆ ನೀಡಿದರು.

ಪಾಟೀಲ ಪುಟ್ಟಪ್ಪ ಅವರು ಮಾತನಾಡಿ, ನಾನು ಮೊದಲಿನಿಂದ ಗಾಂಧಿವಾದಿ. ಬ್ಯಾಡಗಿಯಲ್ಲಿ ಓದುವಾಗ ಗಾಂಧೀಜೀ ಅವರನ್ನು ಭೇಟಿ ಮಾಡಿದ್ದೆ. ಅಂದಿನಿಂದ ಖಾದಿ ತೊಡುವುದಾಗಿ ಪ್ರತಿಜ್ಞೆ ಮಾಡಿದ್ದೆ. ಇಂದಿಗೂ ಅದನ್ನೇ ತೊಡುತ್ತಿದ್ದೇನೆ. ಖಾದಿ ಅಲ್ಲದೆ ಬೇರೆ ವಸ್ತ್ರ ಕೊಟ್ಟರೆ ಬಟ್ಟೆ ತೊಡದೆ ಬತ್ತಲೆ ಇರುತ್ತೇನೆ ಎಂದು ಎಚ್ಚರಿಕೆ ನೀಡಿದ್ದೆ. ಶಾಲೆಯಲ್ಲಿ ನನ್ನ ಬೆದರಿಕೆಗೆ ಅಂಜಿ ಗಾಂಧಿ ವಸ್ತ್ರ ಕೊಟ್ಟರು. ಅಮೆರಿಕಾಗೆ ಹೋದಾಗಲೂ ಗಾಂಧಿ ಟೋಪಿಯನ್ನು ತೊಡುತ್ತಿದ್ದೆ ಎಂದು ಸ್ಮರಿಸಿಕೊಂಡರು.

ನಮ್ಮ ಗುರುಗಳಾದ ಗಂಗಾಧರ ಸವದತ್ತಿ ಅವರು ತಾವು ಕಲಿತಿದ್ದನ್ನು ಮಕ್ಕಳಿಗೆ ಕಲಿಸಿದ್ದರು. ನಾನು ಅವರಿಂದ ಕಲಿತಿದ್ದನ್ನು ಜೀವನದುದ್ದಕ್ಕೂ ಅಳವಡಿಸಿಕೊಂಡೆ ಎಂದರು.

ಅಧ್ಯಕ್ಷತೆ ವಹಿಸಿದ್ದ ಗೋ.ರು.ಚೆನ್ನಬಸಪ್ಪ ಅವರು ಮಾತನಾಡಿ, ರಾಜ್ಯಕ್ಕೆ ಯಾವ ಸರ್ಕಾರವೇ ಬರಲಿ ಪಾಪು ಅವರ ಉಸಿರು ಕನ್ನಡ ಕನ್ನಡದ ಪ್ರತಿನಿಧಿಯಾದ ಅವರ ಜೊತೆ ಇರುವುದೇ ಅಪೂರ್ವ ಅನುಭವ. ಸಿಟ್ಟಿನಲ್ಲಿದ್ದಾಗ ಅವರ ಎದುರು ನಿಲ್ಲುವುದು ಕಷ್ಟ ನೂರು ದಾಟಿದವರು ಅನೇಕರಿದ್ದಾರೆ, ಆದರೆ ಪಾಪು ಅವರಂತೆ ತಮ್ಮ ಜೀವನದಲ್ಲಿ ಕಷ್ಟನಷ್ಟ ಸಹಿಸಿಕೊಂಡು ಸಾಧನೆ ಮಾಡಿದವರು ವಿರಳ ಎಂದರು. ಬಸವ ಸಮಿತಿ ಅಧ್ಯಕ್ಷರಾದ ಅರವಿಂದ ಜತ್ತಿ ಅವರು ಮಾತನಾಡಿ, ಮುಂದಿನ ಪೀಳಿಗೆ ಪಾಪು ಅವರಂತಹ ಮಹಾತ್ಮರ ಜೀವನವನ್ನು ಆದರ್ಶವಾಗಿಟ್ಟುಕೊಳ್ಳಬೇಕು ಎಂದರು.

ಜನ್ಮಶತಮಾನೋತ್ಸವ ಸಮಿತಿಯ ಸಂಚಾಲಕರಾದ ಲೋಹಿತ್ ನಾಯ್ಕರ್ ಪ್ರಾಸ್ತಾವಿಕ ಮಾತುಗಳನ್ನಾಡಿ, ಇದೇ ತಿಂಗಳ 14ರಂದು ಪಾಪು ಅವರಿಗೆ ನೂರು ವರ್ಷ ತುಂಬಲಿದೆ. ಅದರ ಅಂಗವಾಗಿ ಕಾಸರಗೋಡು, ದೆಹಲಿ, ಧಾರವಾಡದಲ್ಲಿ ಸೇರಿದಂತೆ ವಿವಿಧೆಡೆ ಕಾರ್ಯಕ್ರಮಗಳನ್ನು ಆಯೋಜಿಸಲಾಗಿದೆ. ಪಾಪು ವ್ಯಕ್ತಿ, ಶಕ್ತಿ ಎಂಬ ಆತ್ಮಚರಿತ್ರೆ ಬಿಡುಗಡೆ ಮಾಡಲಾಗುತ್ತಿದೆ. ಆರು ಕಡೆ ವಿಚಾರ ಸಂಕಿರಣಗಳು ನಡೆಯಲಿದ್ದು ಈಗಾಗಲೇ ಎರಡು ಕಡೆ ಕಾರ್ಯಕ್ರಮ ಪೂರ್ಣಗೊಂಡಿದೆ ಎಂದರು.

ಪ್ರಜಾವಾಣಿ ಶುಕ್ರವಾರ, 11 ಜನವರಿ 2019



ನಗರದ ಗಾಂಧೀಭವನದಲ್ಲಿಂದು ನಡೆದ ನಾಡೋಜ ಡಾ. ಪಾಟೀಲಪುಟ್ಟಪ್ಪ ಜನ್ಮದಿನೋತ್ಸವ ಕಾರ್ಯಕ್ರಮದಲ್ಲಿ ಪಾಪು ಅವರನ್ನು ಸನ್ಮಾನಿಸಲಾಯಿತು. ಸಚಿವ ಎಂ.ಪಿ, ನಾಡಗೌಡ, ಮಾಜಿ ಕೇಂದ್ರಸಚಿವ ಎಂ.ವಿ. ರಾಜಶೇಖರನ್, ಮಾಜಿ ಸಂಸದ ಹನುಮಂತಪ್ಪ, ಬಿ.ಎಲ್. ಶಂಕರ್, ವೂಡೆ ಪಿ. ಕೃಷ್ಣ ಮತ್ತಿತರರು ಇದ್ದಾರೆ.

ಬೆಂಗಳೂರು,ಜ.11–ಸ್ವಾಭಿಮಾನ, ಭಾಷಾಭಿಮಾನ, ದೇಶಾಭಿಮಾನಕ್ಕೆ ಮಾದರಿ ನಾಡೋಜ ಪಾಟೀಲ್ ಪುಟ್ಟಪ್ಪ ಅವರು ಎಂದು ಪಶು ಸಂಗೋಪನೆ ಹಾಗೂ ಮೀನುಗಾರಿಕೆ ಸಚಿವ ವೆಂಕಟರಾವ್ ನಾಡಗೌಡ ಹೇಳಿದರು.

ಅವರು ಗಾಂಧೀಭವನದಲ್ಲಿ ಪಾಟೀಲ್ ಪುಟ್ಟಪ್ಪ ಜನ್ಮ ಶತಮನೋತ್ಸವ ಸಮಿತಿ, ಬಸವ ಸಮಿತಿ ಮತ್ತು ಗಾಂಧೀ ಸ್ಮಾರಕ ನಿಧಿ ವತಿಯಿಂದ ಏರ್ಪಡಿಸಿದ್ದ ನಾಡೋಜ ಡಾ. ಪಾಟೀಲ್ ಪುಟ್ಟಪ್ಪ ಅವರ ಜನ್ಮ ಶತಮಾನೋತ್ಸವ ಸಮಾರಂಭ ಉದ್ಘಾಟಿಸಿ ಮುಖ್ಯ ಮಂತ್ರಿಗಳ ಸಂದೇಶವನ್ನು ಸಭೆಗೆ ತಿಳಿಸಿದರು.

ರಾಜ್ಯಸರ್ಕಾರದ ವ್ಯವಹಾರಗಳು ಕನ್ನಡದಲ್ಲಿ ನಡೆಯಲು ಪಾಟೀಲ್ ಪುಟ್ಟಪ್ಪ ಅವರೆ ಮೂಲಕಾರಣ. ಕನ್ನಡಿಗರ ಸಾಕ್ಷಿಪ್ರಜ್ಞೆ ಅವರು ಎಂದರು. ಪತ್ರಿಕೋದ್ಯಮದ ಭೀಷ್ಮರೆಂದೇ ಖ್ಯಾತರಾಗಿರುವ ಪಾಟೀಲ್ ಪುಟ್ಟಪ್ಪ ಅವರದ್ದು ಅಸಾಮಾನ್ಯ ಪ್ರತಿಭೆ, ರಾಜಕೀಯ ಕ್ಷೇತ್ರದಲ್ಲಿ, ಸ್ವಾತಂತ್ರ್ಯ ಹೋರಾಟದಲ್ಲಿ ತಮ್ಮದೇ ಛಾಪು ಮೂಡಿಸಿರುವ ಗಾಂಧೀ ಸ್ಪರ್ಶಿಸಿದ ಬಾಲಕ ಎಂದರು.

ಕ್ಯಾಲಿಫೋರ್ನಿಯಾ ವಿವಿಯಿಂದ ಪತ್ರಿಕೋದ್ಯಮ ಪದವಿ ಪಡೆದ ಪುಟ್ಟಪ್ಪ ಅವರಿಗೆ ಸಾಂಘೀಕ ವ್ಯವಸ್ಥೆಯಲ್ಲಿ ಅತಿಯಾದ ನಂಬಿಕೆ. ಬಾಂಬೆ ಕ್ರಾನಿಕಲ್ ಪತ್ರಿಕೆಯಿಂದ ತಮ್ಮ ಪತ್ರಕರ್ತ ವೃತ್ತಿ ಆರಂಭಿಸಿ ನಿಷ್ಠೂರವಾದ ವರದಿಗಳಿಂದ ಪ್ರಖ್ಯಾತಿ ಹೊಂದಿದವರು ಎಂದರು.

ಪಾಟೀಲ್ ಅವರ ನಿಷ್ಠೂರ ಬರಹಗಳು ವ್ಯವಸ್ಥೆಯ ಲೋಪದೋಷಗಳಲ್ಲಿ ಸರಿಪಡಿಸಿವೆ. ತೀಕ್ಷ್ಣ ರೂಪದ ಬರವಣಿಗೆ ಹಾಗೂ ಸತ್ಯ ಪತ್ರಿಕೋದ್ಯಮಕ್ಕೆ ಅತ್ಯಗತ್ಯ ಎನ್ನುವುದನ್ನು ತೋರಿಸಿಕೊಟ್ಟ ಪಾಟೀಲ್ ಪುಟ್ಟಪ್ಪ ಅವರು ಎಲ್ಲ ಕ್ಷೇತ್ರಗಳಲ್ಲಿ ಪಾರಮ್ಯ ಸಾಧಿಸಿದ ಮಹಾನ್ ಸಾಧಕ ಎಂದರು.

ಪಾಟೀಲ್ ಪುಟ್ಟಪ್ಪ ಅವರಿಗೆ ಇದೇ ಜ. 14 ರಂದು 100 ವರ್ಷಗಳು ತುಂಬಲಿದೆ. ಅದರ ಅಂಗವಾಗಿ ಇಂದು ಅವರ ಶತಮಾನೋತ್ಸವ ಏರ್ಪಡಿಸಲಾಗಿತ್ತು. ಗಣ್ಯರು ಶಾಲು ಹೊದಿಸಿ, ಮಾಲಾರ್ಪಣೆ ಮಾಡಿ ಗೌರವ ನಮನ ಸಲ್ಲಿಸಿದರೆ, ಅವರ ಅಭಿಮಾನಿಗಳು ಕಾಲಿಗೆರಗಿ ಧನ್ಯತಾ ಭಾವ ಮೆರೆದರು.

ವೇದಿಕೆಯಲ್ಲಿ ಹಿರಿಯ ಸಾಹಿತಿ ಗೊರೂರು ಚನ್ನಬಸಪ್ಪ, ಅರವಿಂದ ಜತ್ತಿ, ವೂಡೆ ಪಿ. ಕೃಷ್ಣ, ಎಂ.ವಿ. ರಾಜಶೇಖರನ್, ರಾಜ್ಯಸಭಾ ಮಾಜಿ ಸದಸ್ಯ ಹನುಮಂತಪ್ಪ, ಬಿ.ಎಲ್. ಶಂಕರ್, ಶಿಕ್ಷಣ ತಜ್ಞ ರಾಧಾಕೃಷ್ಣ ಮತ್ತಿತರರು ಉಪಸ್ಥಿತರಿದ್ದರು.

# ದೇಶವೇ ಒಂದು ಕುಟುಂಬದಂತಿದ್ದರೆ ಅದೇ ಗಾಂಧಿಯನ್ನು ಅಂತರ್ಗತ ಮಾಡಿಕೊಳ್ಳುವ ಬಗೆ

## -ಡಬ್ಲ್ಯೂ. ಎಚ್. ಹನುಮಂತಪ್ಪ ಸ್ಮಾರಕ ದತ್ತಿ ಕಾರ್ಯಕ್ರಮದಲ್ಲಿ ಡಾ.ಕೆ.ಸತ್ಯನಾರಾಯಣ



"ತಮ್ಮ ಅಹಿಂಸಾ ಹೋರಾಟದ ಮೂಲಕ ದೇಶಕ್ಕೆ ಸ್ವಾತಂತ್ರ್ಯ ತಂದುಕೊಟ್ಟ ಗಾಂಧೀಜಿ ಮಹಾನ್ ಲೇಖಕರೂ ಆಗಿದ್ದರು. ಅವರು ತಮ್ಮ ಜೀವಮಾನದಲ್ಲಿ ಒಂದೂ ಕಾಲು ಲಕ್ಷ ಪುಟಗಳ ಬರವಣಿಗೆ ಮಾಡಿದ್ದಾರೆ. ಗಾಂಧೀಜಿ ಬಗೆಗೆ ನಮ್ಮ ಹುಡುಕಾಟ ಪ್ರಾಮಾಣಿಕವಾಗಿದ್ದರೆ, ಅವರೇ ನಮ್ಮ ಮುಂದೆ ಬರುತ್ತಾರೆ. ತಮ್ಮ ಆತ್ಮ ಚರಿತ್ರೆ ಬರೆಯಲು ಗಾಂಧೀಜಿ ಸಬರಮತಿ ಆಶ್ರಮದಲ್ಲಿ 900 ದಿನ ಇದ್ದರು. ಅರವಿಂದರು. ರಾಮಕೃಷ್ಣ ಪರಮಹಂಸರು, ಅಂಬೇಡ್ಕರ್ ಹೀಗೆ ಬೇರೆ ಬೇರೆ ಚಿಂತಕರನ್ನು ಅಂತರ್ಗತ ಮಾಡಿ ಕೊಂಡಂತೆ ನಮ್ಮ ಮಹಾನ್ ಸಾಹಿತಿಗಳು ಗಾಂಧೀಜಿ ಅವರನ್ನು ಅಂತರ್ಗತ ಮಾಡಿಕೊಳ್ಳಲಿಲ್ಲ. ಗಾಂಧೀಜಿ ಅವರಿಗೆ ಸರ್ದಾರ ವಲ್ಲಭಭಾಯಿ ಪಟೇಲ್ ಮತ್ತು ಅಂಬೇಡ್ಕರ್ ಅವರೊಂದಿಗೆ ಭಿನ್ನಾಭಿಪ್ರಾಯಗಳಿದ್ದವು ಎಂದು ಯೋಚಿಸುವುದು ಬೇಡ. ಅವರೆಲ್ಲರೂ ಆತ್ಮೀಯ ಒಡನಾಡಿಗಳಾಗಿದ್ದರು. ಅಂಬೇಡ್ಕರ್ ನಡೆಸಿದ ಸತ್ಯಾಗ್ರಹದ ಟೆಂಟ್‌ಗಳಲ್ಲಿ ಗಾಂಧೀಜಿ ಭಾವ ಚಿತ್ರ ಇರುತ್ತಿತ್ತು. ಯಾರ ಜೊತೆಯಾದರೂ ವಾಗ್ವಾದ ಮಾಡಬೇಕಾದರೆ. ಮೊದಲು ಅವರ ಜೊತೆ ವೈಯಕ್ತಿಕ ಸಂಬಂಧ ಬೆಳೆಸಿಕೊಳ್ಳಬೇಕು. ಎಂದು ಗಾಂಧೀಜಿ ಹೇಳುತ್ತಿದ್ದರು. ಅವರಂತೆ, ಎಲ್ಲಾ ಧರ್ಮಗಳನ್ನೂ ಸಮಾನವಾಗಿ ನೋಡಿದರೆ ಗಾಂಧೀಜಿ ನಮಗೆ ಅಂತರ್ಗತರಾಗುತ್ತಾರೆ. ಪಾನನಿರೋಧ, ಅಸ್ಪೃಶ್ಯತೆ, ಮಹಿಳಾ ಸ್ವಾತಂತ್ರ್ಯ ಮೊದಲಾದವುಗಳ ಬಗೆಗೆ ಗಾಂಧೀಜಿ ತತ್ವಗಳನ್ನು ಒಪ್ಪಿಕೊಳ್ಳುವುದು, ದೇಶವೇ ಒಂದು ಕುಟುಂಬ ಎಂದು ಭಾವಿಸುವುದು, ಸರೋಜಿನಿನಾಯ್ಡು ಅವರು ಹೇಳಿದಂತೆ, ಗಾಂಧೀಜಿ ಅವರ ಹತ್ಯೆಯಲ್ಲಿ ನಾಥೂರಾಮಗೋಡ್ಸೆ ಒಬ್ಬನದೇ ಅಲ್ಲ, ನಮ್ಮೆಲ್ಲರ ಜವಾಬ್ದಾರಿಯಿದೆ ಎಂಬುದನ್ನು ಪ್ರಾಮಾಣಿಕವಾಗಿ ಒಪ್ಪಿಕೊಳ್ಳುವುದು ಮೊದಲಾದವುಗಳಿಂದ ನಾವು ಗಾಂಧೀಜಿಯನ್ನು ಅಂತರ್ಗತ ಮಾಡಿಕೊಳ್ಳಬಹುದು. ಗಾಂಧಿ ಎಂದರೆ ಆತ್ಮ ನಿಷ್ಠೆ, ಪುಸ್ತಕ ಪ್ರೀತಿ" ಎಂದು ಹಿರಿಯ ಲೇಖಕ ಹಾಗೂ ವರಮಾನ ತೆರಿಗೆ ಇಲಾಖೆಯ ವಿಶ್ರಾಂತ ಆಯುಕ್ತ ಕೆ.ಸತ್ಯನಾರಾಯಣ ಹೇಳಿದರು.

ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಸಹಯೋಗದೊಂದಿಗೆ ಗಾಂಧಿಶಾಂತಿ ಪ್ರತಿಷ್ಠಾನ, ಬೆಂಗಳೂರು ಕೇಂದ್ರ 24-12-2018ರಂದು ಗಾಂಧೀ ಭವನದಲ್ಲಿ ಏರ್ಪಡಿಸಿದ್ದ ಬ್ರಹ್ಮ ಸಮಾಜದ ಮುಖಂಡರು ಹಾಗೂ ಗಾಂಧಿವಾದಿ ಡಬ್ಲ್ಯೂ.ಎಚ್. ಹನುಮಂತಪ್ಪ ಸ್ಮಾರಕ ದತ್ತಿ ಉಪನ್ಯಾಸ ಕಾರ್ಯಕ್ರಮದಲ್ಲಿ ಉಪನ್ಯಾಸಕರಾಗಿ ಭಾಗವಹಿಸಿ, "ಗಾಂಧಿಯನ್ನು ಅಂತರ್ಗತ ಮಾಡಿಕೊಳ್ಳುವ ಬಗೆ" ಕುರಿತು ಮಾತನಾಡಿದ ಕೆ.ಸತ್ಯನಾರಾಯಣ "ರಾಜಾ ರಾಮ ಮೋಹನರಾಯರ ಅಭಿಮಾನಿಯಾಗಿ, ಬ್ರಹ್ಮ ಸಮಾಜದ ಮೂಲಕ ಸಾರ್ವಜನಿಕ ಜೀವನಕ್ಕೆ ಮೌಲ್ಯ ತಂದುಕೊಟ್ಟ, ಎಂ.ಆರ್.ಎ. ಆಗಿ 20ನೇ ಶತಮಾನದಲ್ಲಿ ಬೆಂಗಳೂರು ಭಾರತದ ಪ್ರಮುಖ ನಗರವಾಗುವಂತೆ ಮಾಡುವಲ್ಲಿ ಪ್ರಮುಖ ಪಾತ್ರವಹಿಸಿದ ಕೀರ್ತಿಶೇಷ ಡಬ್ಲ್ಯೂ ಎಚ್.ಹನುಮಂತಪ್ಪ ಪ್ರಾತಃ ಸ್ಮರಣೀಯರು" ಎಂದರು.

ಪ್ರತಿಮಾ ನಾಗರಾಜ್ ನಿರೂಪಿಸಿದ ಕಾರ್ಯಕ್ರಮ ಕು.ಆಶಾ ಪಾರ್ವತಿಭಟ್ "ವೈಷ್ಣವ ಜನತೋ" ಗೀತೆಯನ್ನು ಸುಶ್ರಾವ್ಯವಾಗಿ ಹಾಡುವುದರೊಂದಿಗೆ ಆರಂಭವಾಯಿತು. ಸ್ವಾಗತ ಭಾಷಣ ಮಾಡಿದ ಗಾಂಧೀ ಶಾಂತಿ ಪ್ರತಿಷ್ಠಾನದ ಅಧ್ಯಕ್ಷೆ ಹಾಗೂ ಅಮರ ಬಾಪು ಚಿಂತನ ಮಾಸ ಪತ್ರಿಕೆಯ ಸಂಪಾದಕ ಜೀರಿಗೆ ಲೋಕೇಶ್ 50 ವರ್ಷಗಳ ಕಾಲ ಬ್ರಹ್ಮ ಸಮಾಜದ ಅಧ್ಯಕ್ಷರಾಗಿ ಸಾಮಾಜಿಕ ಮೌಲ್ಯಗಳನ್ನು ಬಿತ್ತಿ ಹೋಗಿರುವ ಡಬ್ಲ್ಯೂ.ಎಚ್. ಹನುಮಂತಪ್ಪ ಅವರನ್ನು ಭಕ್ತಿಯಿಂದ ಸ್ಮರಿಸಿಕೊಂಡರು. ಗಾಂಧೀಜಿ ಅವರಂತೆ ನಾವು ಕಸ್ತೂರ್‌ಬಾ ಅವರನ್ನೂ ಸ್ಮರಿಸಿಕೊಳ್ಳಬೇಕು. ಸ್ವಾತಂತ್ರ್ಯ ಹೋರಾಟದಲ್ಲಿ ಭಾಗಿಯಾಗಿ 1942ರಲ್ಲಿ ಜೈಲು ಶಿಕ್ಷೆಗೆ ಗುರಿಯಾದ ಬಾ 1944ರಲ್ಲಿ ಜೈಲಿನಲ್ಲೇ ನಿಧನರಾದರು" ಎಂದು ಹೇಳಿದರು, ಪ್ರತಿಷ್ಠಾನದ ಕಾರ್ಯದರ್ಶಿ. ಎಸ್.ರಾಮಲಿಂಗೇಶ್ವರ (ಸಿಸಿರಾ) ಅತಿಥಿ ಗಣ್ಯರನ್ನು ಸಭೆಗೆ ಪರಿಚಯಿಸಿದರು.

ಅಧ್ಯಕ್ಷತೆ ವಹಿಸಿದ್ದ ಕರ್ನಾಟಕ ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷ ಹಾಗೂ ಶಿಕ್ಷಣ ತಜ್ಞ ಡಾ.ವೂಡೇ ಪಿ.ಕೃಷ್ಣ "ಅದ್ಭುತ ಉಪನ್ಯಾಸ ನೀಡಿದ ಡಾ.ಕೆ.ಸತ್ಯನಾರಾಯಣ ಮತ್ತು ಅವರನ್ನು ಈ ಕಾರ್ಯಕ್ರಮಕ್ಕೆ ಬರುವಂತೆ ಮಾಡಿದ ಪ್ರೊ.ಮಲ್ಲೇಪುರಂ ಜಿ.ವೆಂಕಟೇಶ್" ಅವರನ್ನು ಅಭಿನಂದಿಸಿದರು "ಗಾಂಧೀಜಿ ಅವರ ವಿವಿಧ ಆಯಾಮಗಳನ್ನು ಡಾ. ಸತ್ಯನಾರಾಯಣ ತೆರೆದಿಟ್ಟಿದ್ದಾರೆ. ಮಹಾತ್ಮಗಾಂಧಿ ಅವರಷ್ಟು ಪ್ರಶಂಸೆಗೆ ಒಳಗಾದವರು ಮತ್ತು ಅಷ್ಟೇ ಟೀಕೆಗೆ ಒಳಗಾದವರು ಇನ್ನೊಬ್ಬರಿಲ್ಲ. ಬಸವಣ್ಣನವರ ಇವನಾರವ ಇವನಾರವನೆಂದೆನಿಸದಿರಯ್ಯ ತತ್ವವನ್ನು ಗಾಂಧೀಜಿ ಅಕ್ಷರಶಃ ಪಾಲಿಸಿದರು. ಗಾಂಧೀಜಿಗಿಂತಲೂ ಮೊದಲು ಇನ್ನೊಬ್ಬ ಗಾಂಧಿ ಹುಟ್ಟಿರಲಿಲ್ಲ. ಮುಂದೆಯೂ ಇನ್ನೊಬ್ಬ ಗಾಂಧಿ ಹುಟ್ಟಲು ಸಾಧ್ಯವಿಲ್ಲ. ಅವರು ಬೋಧಿಸಿದ ಉನ್ನತ ಆಲೋಚನೆ ಮತ್ತು ಸರಳ ಜೀವನ ತತ್ವಗಳು ಇಂದು ತಲೆಕೆಳಗಾಗಿವೆ" ಎಂದು ವಿಷಾದಿಸಿದರು.



ಡಬ್ಲ್ಯೂ ಎಚ್. ಹನುಮಂತಪ್ಪ

ದತ್ತಿ ದಾನಿಗಳ ಪ್ರತಿನಿಧಿ ಹಾಗೂ ಡಬ್ಲ್ಯೂ.ಎಚ್. ಹನುಮಂತಪ್ಪನವರ ಪುತ್ರ ಡಬ್ಲ್ಯೂ.ಎಚ್. ದೇವಕುಮಾರ್‌ರ ವಂದನಾರ್ಪಣೆಯಿಂದ ಮುಕ್ತಾಯವಾದ ಕಾರ್ಯಕ್ರಮದಲ್ಲಿ ಗಾಂಧಿ ಸ್ಮಾರಕ ನಿಧಿಯ ಗೌ.ಕಾರ್ಯದರ್ಶಿ ಇಂದಿರಾ ಕೃಷ್ಣಪ್ಪ, ಪ್ರೊ.ಮಲ್ಲೇಪುರಂ ಜಿ.ವೆಂಕಟೇಶ್ ಮತ್ತಿತರರು ಉಪಸ್ಥಿತರಿದ್ದರು.

## ನಗರದಲ್ಲಿ ಇಂದು

ಪ್ರಜಾವಾಣಿ

ಬುಧವಾರ, 9 ಜನವರಿ 2019



'ಗಾಂಧಿ ಅಂಗಳದಲ್ಲಿ ಗಾಂಧಿ ಚಿಂತಕರು' ಕಾರ್ಯಕ್ರಮ: ಉದ್ಘಾಟನೆ ಮತ್ತು ಸಂವಾದಕ್ಕೆ ಚಾಲನೆ–ಡಾ.ಗಣನಾಥ ಶೆಟ್ಟಿ ಎಕ್ಕಾರು. ಅತಿಥಿ–ಡಾ.ವೂಡೇ ಪಿ. ಕೃಷ್ಣ, ಕೋ. ಚನ್ನಬಸಪ್ಪ. ಆಯೋಜನೆ– ಕರ್ನಾಟಕ ಗಾಂಧಿ ಸ್ಮಾರಕ ನಿಧಿ. ಸ್ಥಳ–ಗಾಂಧಿ ಭವನ, ಬಾಪೂ ಸಭಾಂಗಣ, ಕುಮಾರಕೃಪ ರಸ್ತೆ. ಬೆಳಿಗ್ಗೆ 11

## ಪ್ರಜಾವಾಣಿ

ಗುರುವಾರ ● ಜನವರಿ 3, 2019

ಶೇಷಾದ್ರಿಪುರ ಪ್ರೌಢಶಾಲೆ ವಾರ್ಷಿಕೋತ್ಸವ: ಮುಖ್ಯ ಅತಿಥಿ-ರಾಜು ಚಂದ್ರಶೇಖರ್, ಅಧ್ಯಕ್ಷತೆ-ಎನ್.ಆರ್. ಪಂಡಿತಾರಾಧ್ಯ, ಗೌರವ ಅತಿಥಿಗಳು-ವೂಡೇ ಪಿ.ಕೃಷ್ಣ, ಎಂ.ಎಸ್.ನಟರಾಜ್, ಸ್ಥಳ-ಕುವೆಂಪು ರಂಗಮಂದಿರ, ಕಾಲೇಜು ಆವರಣ, ಶೇಷಾದ್ರಿಪುರ, ಮಧ್ಯಾಹ್ನ 3

## ವಿಜಯವಾಣಿ

● VIJAYAVANI » BENGALURU

ಗುರುವಾರ 3 ಜನವರಿ 2019

3 JANUARY 2019

» ಶಾಲಾ ವಾರ್ಷಿಕೋತ್ಸವ: ಶೇಷಾದ್ರಿಪುರಂ ಪ್ರೌಢಶಾಲೆ ಆಯೋಜನೆ. ವಾರ್ಷಿಕೋತ್ಸವ, 2018-19. ಮುಖ್ಯ ಅತಿಥಿ: ಇಂಡಿಯನ್ ರೆಡ್ ಕ್ರಾಸ್ ಸೊಸೈಟಿ ಬ್ಲಡ್ ಬ್ಯಾಂಕ್‌ನ ಮಾಜಿ ಅಧ್ಯಕ್ಷ ರಾಜು ಚಂದ್ರಶೇಖರ್. ಅಧ್ಯಕ್ಷತೆ: ಶೇಷಾದ್ರಿಪುರಂ ಶಿಕ್ಷಣ ದತ್ತಿ ಅಧ್ಯಕ್ಷ ಎನ್.ಆರ್. ಪಂಡಿತಾರಾಧ್ಯ. ಗೌರವ ಅತಿಥಿ: ಶೇಷಾದ್ರಿಪುರಂ ಶಿಕ್ಷಣ ದತ್ತಿ ಗೌರವ ಸಹ ಕಾರ್ಯದರ್ಶಿಗಳಾದ ಡಾ.ವೂಡೇ ಪಿ. ಕೃಷ್ಣ, ಎಂ.ಎಸ್. ನಟರಾಜ್. ಸ್ಥಳ: ಕುವೆಂಪು ರಂಗಮಂದಿರ, ಶೇಷಾದ್ರಿಪುರಂ ಪ್ರೌಢಶಾಲೆ ಆವರಣ, ಶೇಷಾದ್ರಿಪುರ. ಮಧ್ಯಾಹ್ನ 3ಕ್ಕೆ.

## ವಿಜಯ ಕರ್ನಾಟಕ

ಗುರುವಾರ, 3 ಜನವರಿ 2019

ಮಧ್ಯಾಹ್ನ

ಶೇಷಾದ್ರಿಪುರಂ ಪ್ರೌಢಶಾಲೆ:ಶಾಲಾ ವಾರ್ಷಿಕೋತ್ಸವ - 2018-19. ಅತಿಥಿಗಳು: ಇಂಡಿಯನ್ ರೆಡ್‌ಕ್ರಾಸ್ ಸೊಸೈಟಿ ಬ್ಲಡ್ ಬ್ಯಾಂಕ್‌ನ ಮಾಜಿ ಅಧ್ಯಕ್ಷ ರಾಜು ಚಂದ್ರಶೇಖರ್. ಅಧ್ಯಕ್ಷತೆ: ಶೇಷಾದ್ರಿಪುರಂ ಶಿಕ್ಷಣ ದತ್ತಿ ಅಧ್ಯಕ್ಷ ಎನ್.ಆರ್. ಪಂಡಿತಾರಾಧ್ಯ. ಸ್ಥಳ: ಕುವೆಂಪು ರಂಗಮಂದಿರ, ಕಾಲೇಜು ಆವರಣ. 3.00

## ಸಂಯುಕ್ತ ಕರ್ನಾಟಕ

ಗುರುವಾರ, 3, ಜನವರಿ, 2019

ಶೇಷಾದ್ರಿಪುರಂ ಪ್ರೌಢಶಾಲೆ, ಕುವೆಂಪು ರಂಗಮಂದಿರ, 2018-19ನೇ ಸಾಲಿನ ಶಾಲಾ ವಾರ್ಷಿಕೋತ್ಸವ, ಮುಖ್ಯ ಅತಿಥಿ: ಇಂಡಿಯನ್ ರೆಡ್ ಕ್ರಾಸ್ ಸೊಸೈಟಿ ಮಾಜಿ ಅಧ್ಯಕ್ಷ ರಾಜು ಚಂದ್ರಶೇಖರ್ ಅಧ್ಯಕ್ಷತೆ: ಶೇಷಾದ್ರಿಪುರಂ ಶಿಕ್ಷಣ ದತ್ತಿ ಅಧ್ಯಕ್ಷ ಎನ್.ಆರ್. ಪಂಡಿತಾರಾಧ್ಯ, ಗೌರವ ಅತಿಥಿ: ಪ್ರಧಾನ ಕಾರ್ಯದರ್ಶಿ ಡಾ.ವೂಡೇ ಪಿ.ಕೃಷ್ಣ ಮಧ್ಯಾಹ್ನ 3.00

## ಉದಯವಾಣಿ

ಗುರುವಾರ, ಜನವರಿ 3, 2019

■ ಶೇಷಾದ್ರಿಪುರಂ ಪ್ರೌಢಶಾಲೆ: ಶಾಲಾ ವಾರ್ಷಿಕೋತ್ಸವ. ಮುಖ್ಯ ಅತಿಥಿ: ರೆಡ್‌ಕ್ರಾಸ್ ಸೊಸೈಟಿಯ ಮಾಜಿ ಅಧ್ಯಕ್ಷ ರಾಜು ಚಂದ್ರಶೇಖರ. ಕುವೆಂಪು ರಂಗಮಂದಿರ, ಶೇಷಾದ್ರಿಪುರಂ ಶಾಲೆ. ಮಧ್ಯಾಹ್ನ 3.

## ಕನ್ನಡಪ್ರಭ

ಗುರುವಾರ 3.1.2019

ಶೇಷಾದ್ರಿಪುರಂ ಶಿಕ್ಷಣ ದತ್ತಿ: ಶೇಷಾದ್ರಿಪುರಂ ಪ್ರೌಢಶಾಲೆ ವಾರ್ಷಿಕೋತ್ಸವ-2018. ಅಧ್ಯಕ್ಷತೆ: ಶೇಷಾದ್ರಿಪುರಂ ಶಿಕ್ಷಣ ದತ್ತಿ ಅಧ್ಯಕ್ಷ ಎನ್.ಆರ್. ಪಂಡಿತಾರಾಧ್ಯ. ಅತಿಥಿ: ಇಂಡಿಯನ್ ರೆಡ್‌ಕ್ರಾಸ್ ಸೊಸೈಟಿ ರಕ್ತನಿಧಿ ಮಾಜಿ ಅಧ್ಯಕ್ಷ ರಾಜು ಚಂದ್ರಶೇಖರ್. ಶೇಷಾದ್ರಿಪುರಂ ಶಿಕ್ಷಣ ದತ್ತಿ ಗೌರವ ಪ್ರಧಾನ ಕಾರ್ಯದರ್ಶಿ ಡಾ. ವೂಡೇ ಪಿ. ಕೃಷ್ಣ, ಗೌರವ ಸಹ ಕಾರ್ಯದರ್ಶಿ ಎಂ.ಎಸ್. ನಟರಾಜ್. ಸ್ಥಳ: ಕುವೆಂಪು ರಂಗಮಂದಿರ, ಶೇಷಾದ್ರಿಪುರಂ ಪ್ರೌಢಶಾಲೆ. ಮಧ್ಯಾಹ್ನ 3

...ಳ್ಳುವ ಕೆಲಸ ನಡೆಯುತ್ತಿದೆ. ಇದರ ... ಹಾಗೂ ಚುನಾವಣಾ ಮಾರ್ಗವೂ ಮಾಡದಿದ್ದರೆ, ಊಟ ಮಾಡದಿದ್ದರೆ, ಅದನ್ನು ಪಾಲಿಸಬೇಕು' ಎಂದರು.

## ಚಿಂತಕ, ರಂಗಕರ್ಮಿ ಪ್ರಸನ್ನ ಅವರಿಗೆ ಮಹಾತ್ಮ ಗಾಂಧಿ ಸೇವಾ ಪ್ರಶಸ್ತಿ ಪ್ರದಾನ

# 'ಬೃಹತ್ತಿನ ಯುಗ ಅಂತ್ಯ ಸನ್ನಿಹಿತ, ಗಾಂಧಿ ಮಾರ್ಗ ಅನಿವಾರ್ಯ'

ಪ್ರಜಾವಾಣಿ ವಾರ್ತೆ

ಬೆಂಗಳೂರು: 'ಮಾರಣಾಂತಿಕ ಕಾಯಿಲೆಯಂತಿರುವ ಬೃಹತ್ ಉದ್ಯಮಗಳು ಮತ್ತು ಯೋಜನೆಗಳ ಯುಗ ಮುಗಿಯುತ್ತಾ ಬಂದಿದ್ದು, ಈಗ ನಮಗೆ ಗಾಂಧಿ ಮಾರ್ಗ ಬಿಟ್ಟರೆ ಬೇರೆ ಮಾರ್ಗವಿಲ್ಲ' ಎಂದು ಗಾಂಧಿ ಚಿಂತಕ, ರಂಗಕರ್ಮಿ ಪ್ರಸನ್ನ ಹೇಳಿದರು.

ನಗರದ ರವೀಂದ್ರ ಕಲಾಕ್ಷೇತ್ರದಲ್ಲಿ ಮಂಗಳವಾರ 'ಮಹಾತ್ಮ ಗಾಂಧಿ ಸೇವಾ ಪ್ರಶಸ್ತಿ' ಸ್ವೀಕರಿಸಿ ಮಾತನಾಡಿದ ಅವರು, ಅಭಿವೃದ್ಧಿಯ ಹರಿಕಾರ ಎಂದು ಗಾಂಧಿಯವರನ್ನು ಸ್ವೀಕರಿಸಬೇಕಾದ ಕಾಲವೂ ಬಂದಿದೆ ಎಂದರು.

'ಗಾಂಧಿ ಮಾತ್ರವಲ್ಲ ಬುದ್ಧ, ಬಸವರನ್ನೂ ಸಹ ಪಾರಮಾರ್ಥಿಕ ಮಂದಿರಗಳಿಂದ ಬಿಡುಗಡೆಗೊಳಿಸಿ ಅಭಿವೃದ್ಧಿ ಹರಿಕಾರರನ್ನಾಗಿ ಸ್ವೀಕರಿಸಬೇಕಾಗಿದೆ. ಬೃಹತ್ ಯಂತ್ರೋದ್ಯಮ, ಬೃಹತ್ ಯೋಜನೆಗಳ ಸುತ್ತಲೇ ಗಿರಕಿ ಹೊಡೆಯುತ್ತಿದ್ದ ಮತ್ತು ನಗರ ಕೇಂದ್ರಿತ ಅಭಿವೃದ್ಧಿ ಮಾದರಿಗಳನ್ನು ತಿರಸ್ಕರಿಸಬೇಕಾಗಿದೆ. ಹಾಗೆಂದು, ಯಂತ್ರಸ್ಥಾವರಗಳು, ಬೃಹತ್ ಯೋಜನೆಗಳು ಮತ್ತು ಮಹಾನಗರಗಳನ್ನು ವಿದ್ಯುತ್ ದೀಪ ಆರಿಸಿದಷ್ಟು ಸುಲಭವಾಗಿ ಆರಿಸಿಬಿಡಬೇಕು ಎಂದು ಹೇಳುತ್ತಿಲ್ಲ' ಎಂದರು.

ಒಂದು ಕಾಲದಲ್ಲಿ ಆಧುನಿಕತೆಯ ಮೇರುಕೃತಿಗಳಂತೆ ಕಾಣುತ್ತಿದ್ದ ನಗರಗಳು, ವಿಪರೀತ ಚಲನಶೀಲತೆಯಿಂದ ಚಲಿಸಲಾರದೆ ನಿಂತಿವೆ. ಧೂಳು ಅಮರುತ್ತಿದೆ, ಹಿಂಸೆ ತಾಂಡವವಾಡುತ್ತಿದೆ. ಸೃಷ್ಟಿಯಾದ ಸಂಪತ್ತೆಲ್ಲ ಬೆರಳೆಣಿಕೆಯ ಕೆಲವರ ಜೇಬು ಸೇರುತ್ತಿದೆ. ಬಡವ- ಬಲ್ಲಿದರ ಅಂತರ ಹಿಗ್ಗುತ್ತಿದೆ. ರಾಜಕಾರಣ ಮತ್ತು ಧರ್ಮಕಾರಣ ಎರಡನ್ನೂ ಭ್ರಷ್ಟಗೊಳಿಸುತ್ತಿದೆ ಎಂದು ವಿಷಾದಿಸಿದರು.

'ಬಲಪಂಥೀಯ ರಾಜಕಾರಣವು ವಿಶ್ವಾದ್ಯಂತ ಧಾರ್ಮಿಕ ಅಸಹಿಷ್ಣುತೆ ಹಾಗೂ ಆರ್ಥಿಕ ಅಸಹಿಷ್ಣುತೆಗಳನ್ನು ಬೆಸೆಯುತ್ತಿದೆ. ಪಾರಮಾರ್ಥಿಕ ಕ್ಷೇತ್ರ ಮತ್ತು ಆರ್ಥಿಕ ಕ್ಷೇತ್ರಗಳನ್ನು ಬೆಸೆಯುವ ರೀತಿ ಅದಲ್ಲ. ಗಾಂಧಿ ಮಾರ್ಗ ಮಾತ್ರ ಅದನ್ನು ಬೆಸೆಯಬಲ್ಲದು' ಎಂದರು.

ಮುಖ್ಯಮಂತ್ರಿಯವರು ಪ್ರಶಸ್ತಿ ಪ್ರದಾನ ಮಾಡಿದರು. ಪ್ರಶಸ್ತಿ ₹ 5 ಲಕ್ಷ ನಗದು ಒಳಗೊಂಡಿದೆ. ಪ್ರಶಸ್ತಿಯನ್ನು ಚರಕ ಸಂಸ್ಥೆಯ ಶ್ರಮಜೀವಿ ಆಶ್ರಮಕ್ಕೆ ಅರ್ಪಿಸುವುದಾಗಿ ಪ್ರಸನ್ನ ತಿಳಿಸಿದರು.



ಮುಖ್ಯಮಂತ್ರಿ ಎಚ್.ಡಿ.ಕುಮಾರಸ್ವಾಮಿ ರಂಗಕರ್ಮಿ ಪ್ರಸನ್ನ ಅವರಿಗೆ ಮಹಾತ್ಮಗಾಂಧಿ ಸೇವಾ ಪ್ರಶಸ್ತಿ ನೀಡಿ ಗೌರವಿಸಿದರು. ಗಾಂಧಿ ಸ್ಮಾರಕ ಭವನ ಅಧ್ಯಕ್ಷ ವೂಡೆ ಪಿ.ಕೃಷ್ಣ, ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಇಲಾಖೆ ಕಾರ್ಯದರ್ಶಿ ಪಂಕಜ್ ಕುಮಾರ್ ಪಾಂಡೆ ಮತ್ತು ನ್ಯಾಯಮೂರ್ತಿ ವಿ.ಗೋಪಾಲಗೌಡ ಇದ್ದರು